ಭಕ್ತಿಮಾರ್ಗದಲ್ಲಿಯೂ ಶ್ರೀಕೃಷ್ಣನ ಉಪಾಸನೆಗೇ ಪ್ರಾಧಾನ್ಯವಿದ್ದಿತು. ದ್ವೈತಮತತತ್ತ್ವಪ್ರಬೋಧಕರಾದ ಆವಡು, ತತ್ತ್ವ-ತರ್ಕಗಳಲ್ಲಿ, ಔಪನಿಷದಿಕ ಬ್ರಹ್ಮನ ಬದಲು ಶ್ರೀಹರಿಯ ಹೆಸರನ್ನು ಹೇಳಿರುವರಾದರೂ, ಗೀತಾ ತಾತ್ಪರ್ಯ, ಮಹಾಭಾರತ ತಾತ್ಪರ್ಯನಿರ್ಣಯ, ಭಾಗವತ ತಾತ್-ಪರ್ಯ ಮೊದಲಾದ ಮಹಾ ಮಹಾಗ್ರಂಥಗಳ ಮೂಲಕ, ಶ್ರೀಕೃಷ್ಣನ ಭಕ್ತಿಗೇ ಪ್ರಾಶಸ್ತ್ಯವನ್ನು ಕೊಟ್ಟಂತೆ ಮಾಡಿದ್ದಾರೆ. ಅಲ್ಲದೆ, ಮೊದಲು ಶೈವಕ್ಷೇತ್ರವಾಗಿದ್ದ ಉಡುಪಿಯನ್ನು, ಶ್ರೀಕೃಷ್ಣಮೂರ್ತಿಯ ಸ್ಥಾಪನೆಯ ಮೂಲಕ, ವೈಷ್ಣವಕ್ಷೇತ್ರವನ್ನಾಗಿ ಮಾರ್ಪಡಿಸಿದ್ದಾರೆ. ಶ್ರೀನರಹರಿ-ತೀರ್ಥರು ಕಳಿಂಗದೇಶದ ಮಹಾರಾಣಿಯಿಂದ ಮೂಲ ಸೀತಾ ರಾಮರ ಮೂರ್ತಿಗಳನ್ನು .ಸಂಪಾದಿಸಿ, ಉಡುಪಿಗೆ ತಂದು ತಮ್ಮ ಗುರುಗಳಾದ ಶ್ರೀಮದಾನಂದತೀರ್ಥರಿಗೆ ಒಪ್ಪಿಸುವದಕ್ಕಿಂತ ಮೊದಲು, ಶ್ರೀಮದಾನಂದ ತೀರ್ಥರು ತಮ್ಮ ನಿತ್ಯಾರ್ಚನೆಗಾಗಿ ಇರಿಸಿಕೊಂಡ ದೇವತಾಪ್ರತಿಮೆಗಳಲ್ಲಿ, ವಿಟ್ಠಲ, ;ಕಾಲಿಯಮರ್ದನ ಕೃಷ್ಣ—ಮೊದಲಾದ ಭಾಗವತೋಪಾಸನೆಯ ಮೂರ್ತಿಗಳೇ ಇದ್ದಂತೆ ತೋರುವುದು. (ಮುಂದೆ ತಾವು ಪ್ರತಿಷ್ಠಾಪಿಸಿದ ಅಷ್ಟಮಠದ ಯತಿಗಳಿಗೆ, ತಮ್ಮ ಅರ್ಚನಾಮೂರ್ತಿಗಳನ್ನು ಕೊಟ್ಟಬಗೆಗೆ ಆಖ್ಯಾಯಿಕೆಗಳಿವೆ.)

ಕರ್ನಾಟಕದಲ್ಲಿ ಶ್ರೀಕೃಷ್ಣಭಕ್ತಿ ವಿವಿಧಮುಖವಾಗಿ ಬೆಳೆದಿರುವುದಾದರೂ, ಉತ್ತರದ ಭಕ್ತಿಪಂಥದಲ್ಲಿ ಪ್ರಾಧಾನ್ಯ ಪಡೆದಿರುವ ರಾಧಾ-ಕೃಷ್ಣ ಭಕ್ತಿಯಂತಹ ಮಧುರಾಭಕ್ತಿಗೆ ಇಲ್ಲಿ ಅವಕಾಶ ದೊರೆತಿಲ್ಲ! ಇಷ್ಟೇ ಅಲ್ಲ, ಇಲ್ಲಿಯ ಭಕ್ತಿವಾಙ್ಮಯದಲ್ಲಿ 'ರಾಧಾ' ಎಂಬ ಸ್ತ್ರೀವ್ಯಕ್ತಿಯ ಹೆಸರು ಕೂಡ ಕೇಳುವುದಿಲ್ಲ. ಇದಕ್ಕೆ ಕಾರಣವೆಂದರೆ, ನಮ್ಮ ನಾಡಿನ ಕೃಷ್ಣಭಕ್ತಿಗೆ ಆಧಾರ ಗ್ರಂಥಗಳಾದ ಮಹಾಭಾರತ, ಹರಿವಂಶ, ಭಾಗವತ, ವಿಷ್ಣುಪುರಾಣ, ಗಾರುಡ-ಪಾದ್ಮ ಪುರಾಣಗಳು ಇವುಗಳಲ್ಲಿ ರಾಧೆಯ ಜೀವನಕಥೆಯು ಎಲ್ಲಿಯೂ ಬರುವುದಿಲ್ಲ. ರಾಧೆಯ ಪ್ರೇಮಭಕ್ತಿಯ ಕಥೆಯು, ಒಂದೆ ಒಂದು ಬ್ರಹ್ಮ ವೈವರ್ತಪುರಾಣದಲ್ಲಿ ಮಾತ್ರ ಕಂಡುಬರುತ್ತದೆ. ಉತ್ತರದಲ್ಲಿ ಹೆಚ್ಚು ಪ್ರಚಾರ ದಲ್ಲಿರುವ ರಾಧಾಪ್ರಧಾನ ಶ್ರೀಕೃಷ್ಣಭಕ್ತಿಗೆ, ಈ ಬ್ರಹ್ಮವೈವರ್ತ ಪುರಾಣವೇ ಮುಖ್ಯ ಪ್ರಮಾಣಗ್ರಂಥವಾಗಿರಬಹುದು. ಕನ್ನಡ ನಾಡಿನಲ್ಲಿ ರೂಢವಾಗಿರುವ

ಶ್ರೀಕೃಷ್ಣಭಕ್ತಿಯಲ್ಲಿ ಗೋಕುಲದ ಗೋಪವನಿತೆಯರ ಸಾಮೂಹಿಕವಾದ ಪ್ರೇಮಭಕ್ತಿಯ ಕಥೆ ಬಂದಿರುವುದಾದರೂ, ರಾಧಾಕೃಷ್ಣಲೀಲೆಗೆ ಅವಕಾಶವೇ ದೊರೆತಂತಿಲ್ಲ. ಕಾರ್ತಿಕಮಾಸದ ತುಲಸೀಕಲ್ಯಾಣ ಮಹೋತ್ಸವ ಕಾಲದಲ್ಲಿ 'ರಾಧಾ-ದಾಮೋದರ' ಎಂಬ ದ್ವಂದ್ವದೈವತದ ಹೆಸರು ಕಾಣುವುದಾದರೂ, ಈ ಪರಂಪರೆ, ಆ ಮೇಲೆ ಯಾವ ಕಡೆಯಿಂದಲೋ ಯಾವಾಗಲೋ—ಬಂದು ಸೇರಿಕೊಂಡಿದೆಯೆಂದು ಹೇಳಬಹುದಾಗಿದೆ.

ಶ್ರೀವ್ಯಾಸರಾಯರ ಕೀರ್ತನೆಗಳು ಸಂಖ್ಯೆಯಲ್ಲಿ ಅಲ್ಪವಾಗಿದ್ದರೂ, ಇದ್ದುವುಗಳಲ್ಲಿ ಶ್ರೀಕೃಷ್ಣನ ಲೀಲಾವಿಲಾಸ ವರ್ಣನೆಗಳೇ ಅಧಿಕವಾಗಿರುವುವು. ಶ್ರೀಪುರಂದರದಾಸರ ಹಾಡು-ಕೀರ್ತನ ಸುಳಾದಿಗಳು ಬಹುಸಂಖ್ಯಾಕ. ಇಹ-ಪರಗಳೆರಡನ್ನೂ ಕುರಿತು ಇವರು ತಮ್ಮ ಸಾಹಿತ್ಯದಲ್ಲಿ ವಿಚಾರ ಮಾಡಿರುವರು. ಪರಮಾತ್ಮನ ಭಕ್ತಿವಿಷಯಕ ಹಾಡು-ಕೀರ್ತನೆಗಳನ್ನು ಶೋಧಿಸಿ ನೋಡಿದರೆ, ಶ್ರೀಕೃಷ್ಣನನ್ನು ಉದ್ದೇಶಿಸಿ ಹಾಡಿದ ಹಾಡು-ಕೀರ್ತನೆಗಳೇ ಹೆಚ್ಚಾಗಿರುವುವು. ಇವರು 'ಮೂರುತಿಯನೆ ನಿಲ್ಲಿಸೋ,: ಮಾಧವ ನಿನ್ನ' ಎಂದು ಹಾಡಿದುದು ಶ್ರೀಕೃಷ್ಣಮೂರ್ತಿಯ ದರ್ಶನಾಪೇಕ್ಷೆಯಿಂದಲೆ! ಅಂತರಂಗದಲ್ಲಿ ಆಗಾಗ ಕಂಡುದು 'ಮಸ್ತಕದಲಿ ಮಾಣಿಕದ ಕಿರೀಟ, ಕಸ್ತುರಿತಿಲಕದಿ ಹೊಳೆವ ಲಲಾಟ'ದ ಶ್ರೀಕೃಷ್ಣಮೂರ್ತಿಯನ್ನೇ! ಆರ್ತ-ಭಾವದಿಂದ ಹಂಬಲಿಸಿದುದು 'ನೀನೇ ಅನಾಥಬಂಧು ಕೃಷ್ಣಾ, ನೀನೇ ಕರುಣಾಸಿಂಧು!' ಎಂದು ಶ್ರೀಕೃಷ್ಣನನ್ನು ಕುರಿತೇ! ಶ್ರೀಕೃಷ್ಣನನ್ನೇ ಉಪಾಸ್ಯದೈವತವಾಗಿ ಇರಿಸಿಕೊಂಡುದರಿಂದ, ಭಾಗವತದ ದಶಮಸ್ಕಂಧದಲ್ಲಿ ಬಂದಿರುವ ಶ್ರೀಕೃಷ್ಣನ ಅನೇಕ ಲೀಲೆಗಳನ್ನು ಪ್ರತ್ಯೇಕ-ಪ್ರತ್ಯೇಕ ಹಾಡು ಕೀರ್ತನೆ ಸುಳಾದಿಗಳಿಗೆ ಇವರು ಮೂಲವಸ್ತುವನ್ನಾಗಿಸಿಕೊಂಡಿದ್ದಾರೆ.

ಪುರಂದರದಾಸರು ಶ್ರೀಕೃಷ್ಣನ ಲೀಲೆಗಳನ್ನು ಗೀತಮಯವಾಗಿ ವಿವರಿಸಲು ವಿವಿಧಭಾವಗಳನ್ನು. ಸ್ವಾರಸ್ಯ ಔಚಿತ್ಯಗಳ ಪ್ರಜ್ಞೆಯಿಂದ ಉಪಯೋಗಿಸಿಕೊಂಡಿದ್ದಾರೆ. ಶ್ರೀಕೃಷ್ಣನನ್ನು ಮಗುವನ್ನಾಗಿ ಪಡೆದ ಯಶೋದೆಯ ಭಾಗ್ಯವನ್ನು ಬಣ್ಣಿಸುವುದರಲ್ಲಿ ತಮ್ಮನ್ನೇ ತಾವು ಮರೆತು ಬಿಟ್ಟಿರುವರು!

ಗೋಪಿಯ ಭಾಗ್ಯವಿದು ।
ಆ ಪರಮಾತ್ಮನ ಅಪ್ಪಿ ಮುದ್ದಿಡುವುದು ॥ ಪಲ್ಲವಿ ॥

ನಿತ್ಯನಿರ್ಮಲನಿಗೆ ನೀರನೆರೆದು ತಂದು
ಎತ್ತಿ ತೊಡೆಯೊಳಿಟ್ಟು ಮುದ್ದಿಸುತ ॥
ಸತ್ಯಲೋಕವನಾಳುವ ವಿಧಿಜನಕನ
ಪುತ್ರನೆಂದರಿತು ತಕ್ಕಯಿಸುವಳೋ ॥

ಪಾಲುಗಡಲು ಮನೆಯಾಗಿ ಮೂಲೋಕವ
ಪಾಲಿಸುತಿಪ್ಪ ನಾರಾಯಣನ ॥
ಕಾಲಮೇಲೆ ಮಲಗಿಸಿ ಬಟ್ಟಲ ತುಂಬ
ಹಾಲು ಕುಡಿಸಿ ಸಂತಯಿಸುವಳೋ ! ॥ ”

ಅನಂತಕಲ್ಯಾಣಗುಣಪೂರ್ಣನೂ ಸೃಷ್ಟ್ಯಾದ್ಯಷ್ಟ ಕರ್ತೃತ್ವವುಳ್ಳವನೂ ಆದ ಶ್ರೀಹರಿ, ಯಶೋದೆಯ ಬಾಲಕನಾಗಿ ಅವಳಿಂದ ಶೈಶವಸಹಜ ಲಾಲನೆಗಳನ್ನು ಪಡೆಯುವುದು ದಾಸರಿಗೆ ಕೌತುಕದ್ದಾಗಿ ಕಂಡಿದೆ. ವಿಸ್ಮಯಭಾವವನ್ನು ವಿವಿಧರೀತಿಯಿಂದ ಅರಳಿಸಿ ತೋರಿಸಿದ್ದಾರೆ. ಅವರು ಈ ಹಾಡಿನಲ್ಲಿ ಆದರಂತೆಯೆ 'ಜಗದುದ್ಧಾರಕ ತನ್ನ ಮಗನೆಂದು ಬಗೆದು' ಯಶೋದೆ ಆಡಿಸುವುದೂ ದಾಸರನ್ನು ವಿಸ್ಮಯಭಾವದಲ್ಲಿ ತೇಲಾಡಿಸಿರುವುದು. 'ಮಗನೆಂದಾಡಿಸುವಳು, ಮೊಗ ನೋಡಿ ನಗುವಳು । ಜಗದುದರನ ತನ್ನ ಮಗನೆಂದೆನಿಸಿಕೊಂಡು ಬಿಗಿದಪ್ಪುವ ಪುಣ್ಯವೆಲ್ಲಿ ಪಡೆದಳೋ !' ಎಂಬ ಹಾಡಿನಲ್ಲಿ ಯಶೋದೆಯ ಮಾತೃವಾತ್ಸಲ್ಯಭಾವವನ್ನು ಮನೋಹರವೆನಿಸುವಂತೆ ಪರಿಪುಷ್ಟಿಗೊಳಿಸಿ ತೋರಿಸಿದ್ದಾರೆ.

ಗೋಕುಲ ನಾರಿಯರ ಭಾವವನ್ನು ತಾವೇ ಅನುಭವಿಸಿದವರಾಗಿ,

“ ನಿನ್ನ ಮಗನೇನೆ ಗೋಪಿ—ಗೋಪಮ್ಮಾ
ನಿನ್ನ ಮಗನೇನೆ ಗೋಪಿ ? ॥ ಪ ॥

ಚೆನ್ನಾರ ಚೆಲುವ ಉಡುಪಿಯ ಕೃಷ್ಣಬಾಲ
ನಿನ್ನ ಮಗನೇನೆ ಗೋಪಿ ? ॥ ಅ. ಪ ॥ ’

ಎಂದೂ

"ಎಂಥಾ ಪುಣ್ಯವೆ ನಿನ್ನದೆಂಥಾ ಭಾಗ್ಯವೆ ಗೋಪಿ
ಇಂಥ ಮಗನ ಕಾಣೆವೆ ! ‖ ಪಲ್ಲ ‖

ಚಿಂತಿಸಿದರೂ ದೊರಕ ಚೆಲುವ ರಾಜಗೋಪಾಲ
ಇಂತೀ ಮಾತುಗಳೆಲ್ಲವು—ಹುಸಿಯಲ್ಲವು ‖ ಅ. ಪ ‖"

ಎಂದು ಅಚ್ಚರಿಯಿಂದ ತಾಯಿ ಯಶೋದೆಯನ್ನು ಕೇಳಿದ್ದಾರೆ.

"ಗೋಕುಲದ ಗೋಪಿಯರದೇಸು ಧನ್ಯರೋ !
ಶ್ರೀಕಾಂತನ ಅನುರಾಗದಲಿ ಪಾಡುತಿಹರೋ ! ‖ ಪಲ್ಲ ‖

ಕುಳಿತು ಕರೆವಾಗ ನಿಂತು ಕಳವೆಗಳ ಕುಟ್ಟುವಾಗ
ತಳಿ ಸಾರಣೆ ಸಮ್ಮಾರ್ಜಿಸುವಾಗ
ಅಳುವ ಮಕ್ಕಳ ತೊಟ್ಟಿಲೊಳಿಟ್ಟು ತೂಗುವಾಗ
ಬೆಳಗುಜಾವದಿ ಮೊಸರ ಕಡೆವಾಗಲು ‖ ೧ ‖

ಎಂದು ತಮ್ಮ ಸಾತ್ತ್ವಿಕಕಾಮನೆಯನ್ನು ಪರ್ಯಾಯವಾಗಿ ಹೊರಹೊಮ್ಮಿಸಿದ್ದಾರೆ. 'ನಿನ್ನ ಬಾಲತನದ ಲೀಲೆಗೆ ನಮೋ ನಮೋ!' ಎಂದು ಅನಿರ್ವಚನೀಯ ಭಾವದಲ್ಲಿ ಉಗಾಭೋಗವನ್ನು ಹಾಡಿದ ದಾಸರು, ಮಾತೃವಾತ್ಸಲ್ಯವನ್ನು ಸೂಸುತ್ತ ಬಾಲಕೃಷ್ಣನನ್ನು 'ಮುದ್ದು ತಾರೋ—ಕೃಷ್ಣ—ಎದ್ದು ಬಾರೋ!' ಎಂದು ಮುದ್ದುನುಡಿಗಳಿಂದ ಕರೆದಿದ್ದಾರೆ. 'ತೋಳನ್ನಾಡೈ!' ಎಂದು ಅವನನ್ನು ತೋಳನ್ನಾಡಿಸಿದ್ದಾರೆ. 'ಅಂಗುಲದೊಳು ಪೊನ್ನುಂಗುರವೊಪ್ಪುವ ಕೈಯ ತೋರೋ' ಎಂದು, ಶ್ರೀಹರಿಯ ವಿವಿಧಲೀಲೆಗಳ ಜ್ಞಾಪಕಗಳೊಂದಿಗೆ ಕೇಳಿಕೊಂಡಿದ್ದಾರೆ. ಆ ಶಿಶುರೂಪಿ ವಾಸುದೇವನನ್ನು 'ತಾರಮ್ಮಯ್ಯ ಯದುಕುಲ ವಾರಿಧಿಚಂದ್ರಮನ' ಎಂದು ಹಾಡಿ ಆಡಿಸಿದ್ದಾರೆ. 'ಹಣ್ಣು ತಾ ಜೆಣ್ಣೆ ತಾರೇ' ಎಂದು ಹಾಡುತ್ತ ಶ್ರೀಕೃಷ್ಣನ ಕೈಯ ಮಹಿಮೆಯನ್ನು ವಿವರಿಸಿದ್ದಾರೆ. 'ಹರಿ ಕುಣಿದ ನಮ್ಮ ಹರಿ ಕುಣಿದ!' ಎಂದು ಹಾಡಿ, ಆ ಶಿಶುದೈವದ 'ಅರಳೆಲೆ ಮಾಗಾಯಿ ಕೊರಳ ಮುತ್ತಿನ ಸರ ತರಳರ ಕೂಡಿ ತಾ ಹರಿ ಕುಣಿದ' ನೃತ್ಯಲೀಲೆಯನ್ನು ಕೊಂಡಾಡಿದ್ದಾರೆ. ಬಾಲಲೀಲೆಯನ್ನು ವಿವರಿಸುವ ಸುಳಾದಿಗಳಂತೂ ವಾತ್ಸಲ್ಯ ಭಾವದ ಆಗರವಾಗಿವೆ :

‘ಹೊಡೆಮರಳ ಕಲಿತ ಶ್ರೀಕೃಷ್ಣ ನಾಗರ-
ಹೆಡೆಯಂತೆ ತಲೆಯೆತ್ತಲು ಕಲಿತ ಕೃಷ್ಣ
ಕಡುಮುದ್ದು ಸುರಿವಂತೆ ನಗಲು ಕಲಿತ ಕೃಷ್ಣ
ನುಡಿಯೆ ಕಲಿತ ‘ ಉಗ್ಗು ಉಗ್ಗು ’ ಎಂದು ಕೃಷ್ಣ
ಉಡಿಗಂಟೆ ಹುಲಿಯುಗುರರಳೆಲೆ ವಾಗಾಯಿ
ಕಡಗ-ಕಂಕಣದಿಂದ ಮುದ್ದು ಮೆರೆವ ಕೃಷ್ಣ
ಮಡದಿಯರೆತ್ತಿ ಮುದ್ದಾಡಿಸಲವರ ಓ-
ರುಡೆಯ ಮೇಲಿದ್ದೆದ್ದು ಕುಣಿವನು ಕೃಷ್ಣ !
ಹಿಡಿಹೊನ್ನು ಗುಬ್ಬಿ ತಾ ಹೊನ್ನ ಗುಬ್ಬಿಯನಾಡಿ
ಜಡಿದು ಚಪ್ಪಾಳೆಯಿಕ್ಕುವನು ಕೃಷ್ಣ !’

ಹೀಗೆ ಶ್ರೀಕೃಷ್ಣನ ಶೈಶವಲೀಲೆಗಳನ್ನು ಎಷ್ಟೆಷ್ಟು ಪರಿಯಿಂದ ಕೊಂಡಾಡಿ ಕೊನೆದರೂ ದಾಸರಿಗೆ ತಣಿವುತೋರದು. ನೋಡೆ ಗೋಪೀ,‘ಗೋಕುಲದೊಳು ಹರಿ ಮಾಡುವ ಲೀಲೆಗಳಪ್ರತಿಯಮ್ಮ!’ ಎಂಬ ಹಾಡಿನಲ್ಲಿ ಹೇಳಿದ ಶ್ರೀಕೃಷ್ಣನ ಶಿಶುತನದ ಕೋರಿಕೆಗಳು. ಎಂತಹ ಬಿರುಮನದಲ್ಲಿಯೂ ವಾತ್ಸಲ್ಯಭಾವವನ್ನು ಹುಟ್ಟಿಸಿ, ಜನರ ಮುಖದಲ್ಲಿ ಮೆಲುನಗೆಯನ್ನು ಆಟವಾಡಿಸುತ್ತದೆ. ಇದರಂತೆಯೆ ಶ್ರೀಕೃಷ್ಣನ ಬಾಲಲೀಲೆಯ ತುಂಟಾಟಗಳೂ ದಾಸರ ಮುಖದಿಂದ ಅಮೃತತರಂಗಿಣಿಯಾಗಿ ಹರಿದಿವೆ. ಯಶೋದೆ ಲೌಕಿಕ ಮಾತೃಭಾವದಿಂದ ಪುಟ್ಟ ಕೃಷ್ಣನನ್ನು ಕುರಿತು ಆಡಿದ ಗಾಬರಿಯ ಮಾತುಗಳಿವು—ಇವುಗಳಲ್ಲಿ ಶ್ರೀಹರಿಯ ದಶಾವತಾರದ ಲೀಲೆ ಎಷ್ಟೊಂದು ಚಮತ್ಕೃತಿಯಿಂದ ಹೆಣೆದು ಕೊಂಡಿದೆಯೆಂಬುದನ್ನು ನೋಡಿರಿ :

“ ಏನಾಯಿತು ರಂಗಗೆ ನೋಡಿರಮ್ಮಾ— ನಿ-
ಧಾನಿಸಿ ಎನಗೊಂದು ಪೇಳಿರಮ್ಮಾ ॥ ಪಲ್ಲವಿ ॥

ಪುಟ್ಟಿದಾರಭ್ಯ ಕಣ್ಣ ಮುಚ್ಚನಮ್ಮ— ತಾನು
ಎಷ್ಟಾದರೂ ಮೊಲೆಯುಣ್ಣನಮ್ಮ ।
ಸೊಟ್ಟಾದ ಮುಖ ಮೇಲಕ್ಕೆತ್ತನಮ್ಮ—ಹೀಗೆ
ಎಷ್ಟು ಹೇಳಲಿ ಬಾಯ ಮುಚ್ಚನಮ್ಮ ॥ ೧ ॥

ಕಾಯ ಇದ್ದಂತಿದ್ದು ಹೆಚ್ಚಿತಮ್ಮ—ಹೆತ್ತ
ತಾಯಿಯ ಒಲವಿಲ್ಲದಾಯಿತಮ್ಮ ||

ನೋಯೆ ನೋಟಕೆ ಅಬ್ಧಿ ಬತ್ತಿತಮ್ಮ—ಅವನ
ಬಾಯಿಯೊಳಗೆ ವಿಶ್ವ ತೋರಿತಮ್ಮ || ೨ ||

ಅತ್ಯಂತ ಮಾತುಗಳನಾಡಿದನಮ್ಮ—ಮುಂದೆ
ಸತ್ಯವು ಕುದುರೆಯನೇರುವನಮ್ಮ ||

ನಿತ್ಯನಿರ್ದೋಷ ಪುರಂದರ ವಿಠಲ—ತನ್ನ
ಭಕ್ತರ ಸಲಹುವ ದೇವನಮ್ಮ ||

ಶ್ರೀಕೃಷ್ಣನ ಶೈಶವಲೀಲೆಗಳು ಎಷ್ಟೆಷ್ಟು ರೀತಿಯವು? ದಾಸರು ಒಂದು ಸಲ—ಯಶೋದೆಯ ಆವಿರ್ಭಾವದಲ್ಲಿ—'ಸೆರಗ ಬಿಡಯ್ಯ ಕೃಷ್ಣ—ಕರೆಯಲು ಪೋಪೆನು' ಎಂದು ಬೇಡಿಕೊಂಡು ಕೆನೆಮೊಸರು, ಬೆಣ್ಣೆ, ಗೊನೆ ಬಾಳೆಹಣ್ಣು, ನೆನೆಗಡಲೆ, ಕೊಬ್ಬರಿಗಳ ಆಶೆಯನ್ನು ಆತನಿಗೆ ತೋರಿಸುವರು. ಇನ್ನೊಂದು ಸಲ ಅವನನ್ನು ಮನೆಯಲ್ಲಿ ಕಾಣದೆ 'ಅಮ್ಮ ನಿಮ್ಮ ಮನೆಗಳಲ್ಲಿ ನಮ್ಮ ಕೃಷ್ಣನ ಕಾಣಿರೇನೇ?' ಎಂದು ಹುಡುಕುತ್ತ ಆತನ ರೂಪ-ಗುಣ-ಲೀಲೆಗಳನ್ನೆಲ್ಲ ಬಣ್ಣಿಸುವರು. ಮತ್ತೊಂದು ಸಲ 'ಎಣ್ಣೆಯನೂಡುತ ಯದುಕುಲತಿಲಕನ' ಬಣ್ಣಿಸಿ ಹರಸುವರು. 'ಬೂಚಿ ಬಂದಿದೆ' ಎಂದು ಬಾಲರೂಪಿಯನ್ನು ಹೆದರಿಸುವರು. ಮತ್ತೆ ಮುಂದೆ ಬಾಲಕೃಷ್ಣನ ಭಾವವನ್ನು ನಟಿಸುತ್ತ 'ಗುಮ್ಮನ ಕರೆಯದಿರೆ ಅಮ್ಮಾ ನೀನು—ಗುಮ್ಮನ ಕರೆಯದಿರೆ!' ಎಂದು ತಾಯಿ ಯಶೋದೆಯನ್ನು ಬೇಡಿಕೊಳ್ಳುವರು. 'ಗುಮ್ಮನೆಲ್ಲಿಹ ತೋರಮ್ಮಾ—ನಮ್ಮಮ್ಮಾ—ಸುಮ್ಮನಂಜಿಸಬೇಡಮ್ಮಾ!' ಎಂದು ದಿಟ್ಟತನದ ಮಾತುಗಳನ್ನಾಡಿ, ಶ್ರೀಕೃಷ್ಣನ ಮಾಹಾತ್ಮ್ಯವನ್ನು ಪ್ರಕಟಿಸುವರು. ಶೈಶವಲೀಲೆಯಂತೆಯೆ ಶ್ರೀಕೃಷ್ಣನ ಬಾಲಲೀಲೆಗಳನ್ನೂ ದಾಸರು ವಿವಿಧರೀತಿಯಲ್ಲಿ ಹಾಡಿರುವರು. ಈ ಹಾಡಿನ ರಚನೆಯ ರೀತಿ ನಾಟ್ಯ-ಗೀತ ತಂತ್ರಕ್ಕೆ ಅನುಸಾರಿಯಾದುದು. ಈ ಬಾಲಲೀಲೆಯನ್ನು ಒಳಗೊಂಡ ಸುಳಾದಿಯೂ ಒಂದು ಕಮನೀಯವಾದ ಭಾವಕವನ!

ನಾಲ್ಕನೆಯ ಗೀತಗುಚ್ಛವಾಗಿ ಇದರಲ್ಲಿ ಪ್ರಕಟವಾಗಿರುವ ಗೀತಗಳೆಲ್ಲವೂ ಸುಂದರವಾದ ನಾಟ್ಯಾಭಿನಯ ಗೀತಗಳು. ಯಶೋದೆಗೆ ತಿಳಿಯದಂತೆ ಶ್ರೀಕೃಷ್ಣ ಹಿಂಬದಿಯಿಂದ ಬಂದು ಆಕೆಯ ಕಣ್ಣುಗಳನ್ನು ಮುಚ್ಚಿದ ದೃಶ್ಯವೊಂದನ್ನು ಕಲ್ಪಿಸಿ, ಯಶೋದೆಯ ಬಾಯಿಂದ ಹೀಗೆ ನುಡಿಸಿದ್ದಾರೆ :

'ನೀನಾರವ ಹೇಳೆನ್ನ ಕಣ್ಣ ಮುಚ್ಚಿದೆ!
ಮೌನಗೊಂಡರಿಯದಂತಿಪ್ಪ ಮಗುವೇ ॥ ಪಲ್ಲವಿ ॥

ಅತಿ ಚೆಲುವಿಗೆ ರತಿಪತಿಪಿತನೋ—ನೀ
ಶ್ರುತಿಸಕಲಾನ್ವಯ ಸನ್ನುತನೋ?

ಚತುರ್ದಶ ಭುವನವನಾಳಿದನೋ—ನೀ
ಶತ ತಪ್ಪುಗಳನೆಣಿಸಿದವನೋ? ॥ ೧ ॥

ಹೀಗೆಯೇ ಶ್ರೀಹರಿಯ ಮಾಹಾತ್ಮ್ಯಗಳನ್ನು ಒಂದೊಂದಾಗಿ ವಿವರಿಸುತ್ತ ಆ ತಾಯಿ, 'ನೀನಾರು' ಎಂದು ಕೇಳುವಳು. ಕೊನೆಗೆ ಶ್ರೀಕೃಷ್ಣ ಚತುರ್ಭುಜ ರೂಪದಿಂದ ನಸುನಗುತ್ತ ಆಕೆಯ ಎದುರು ಬಂದು ನಿಲ್ಲಲು,

'ಅಸುರಾರಿಯ ಕಂಡು ಮುದ್ದಿಸುತ
ನೀ ಶಿಶುವಲ್ಲ ಪುರಂದರ ವಿಠಲನೆನುತ'

ಯಶೋದೆ ಪ್ರೀತಿ-ಭಕ್ತಿಗಳಿಂದ ನುಡಿಯುವಳು.

ಇನ್ನೊಂದು ಗೀತದಲ್ಲಿ, ಶ್ರೀಕೃಷ್ಣ ದಾಸಯ್ಯನ ವೇಷ ತಳೆದು ಬಂದಂತೆಯೂ ಗೋಪಿಯರೆಲ್ಲ ಸೇರಿ ತಮ್ಮ ಕೇರಿಗೆ ಬರಲು ಕರೆಯುವಂತೆಯೂ ಸನ್ನಿವೇಶವನ್ನು ರಚಿಸಿದ್ದಾರೆ. ಒಂದೊಂದು ನುಡಿಯನ್ನು ಒಬ್ಬೊಬ್ಬ ಗೊಲ್ಲತಿ ಹೇಳಿದಂತಿದೆ:

ಕಪ್ಪು ವರ್ಣದ ದಾಸಯ್ಯ—ಕಂ-
ದರ್ಪನ ಪಿತನೆಂಬ ದಾಸಯ್ಯ

ಒಪ್ಪಿಕೊಂಡು ಎನ್ನ ಮನೆಗೆ ಬಂದರೆ ತೋಳ್-
ಕುಪ್ಪಸ ಕೊಡುವೆನು ದಾಸಯ್ಯ ॥ ೩ ॥

ಶಾಲು ಹೊದಿಸುವೆನು ದಾಸಯ್ಯ—ತುತ್ತು
ಹಾಲುಬೋನ ಉಣಿಸುವೆ ದಾಸಯ್ಯ ॥

ಕಾಲಿಗೆ ಬಿದ್ದೆನು ದಾಸಯ್ಯ—ವನ-
ಮಾಲೆಯ ಕೊಡುವೆನು ದಾಸಯ್ಯ ॥ ೪ ॥

ಮತ್ತೊಂದು ಗೀತದಲ್ಲಿ ಒಬ್ಬ ಗೊಲ್ಲತಿ :

ಎಲ್ಲಿ ಬೆಣ್ಣೆಯ ಬಚ್ಚಿಡುವೆನಾ—ಈ
ಕಳ್ಳ ಕೃಷ್ಣನ ಹಾವಳಿ ಘನವಾಯಿತು ॥ ಪಲ್ಲವಿ ॥

ನೆಲುವು ನಿಲುಕದೆಂದಿಡುವೆನೆ—ನೋಡೆ
ಬೆಳೆಯಬಲ್ಲನಿವ ಬ್ರಹ್ಮಾಂಡಕೆ ॥

ತಿಳಿಸದೆ ಕತ್ತಲೊಳಿಡುವೆನೆ?—ಅಕ್ಕ
ಬೆಳಕೆಲ್ಲವೀತನ ಕಂಗಳ ಥಾಳ ॥ ೧ ॥

ಎಲ್ಲೆಲ್ಲಿಯೂ ಶ್ರೀಕೃಷ್ಣನ ಲೌಕಿಕಲೀಲೆ—ಅಲೌಕಿಕ ಲೀಲೆಗಳ ಸರಸ-ಸಮನ್ವಯದ ಮಾತುಗಳು ! ಈ ಬಗೆಯ ಕೃತಿರಚನೆ ಪುರಂದರದಾಸರಂತಹ ಭಕ್ತಿಭಾವ ಪರಿಪಕ್ವಹೃದಯರಿಗೆ ಮಾತ್ರ ಸಾಧ್ಯ.

'ಗೋಪಿಕಾ ಪ್ರೇಮಲೀಲೆ' ಎಂಬ ಭಾಗದಲ್ಲಿ ಬರುವ ಗೀತಗಳಲ್ಲಿ ದಾಸರ ಅನೇಕ ಬಗೆಯ ರಚನಾಕೌಶಲ್ಯವನ್ನು ಕಾಣಬಹುದಾಗಿದೆ. ಅವುಗಳ ಸೌಂದರ್ಯವನ್ನು ಇಲ್ಲಿ ವಿವೇಚಿಸುತ್ತ ಕುಳಿತರೆ, ಈ ಬರೆಹ ಬೆಳೆಯುತ್ತ ಹೋಗುವುದು. 'ವೇಣುನಾದಲೀಲೆ'ಯಲ್ಲಿ ಬರುವ ಗೀತೆಗಳಲ್ಲಿ ಕಾಣುವ ಮುರಲೀಧರನ ಚಿತ್ರ, ಭಾವುಕರನ್ನು ಮುಗ್ಧಗೊಳಿಸುವಂತಿದೆ. ಈ ಭಾಗದಲ್ಲಿ ಸೇರ್ಪಡೆಯಾಗಿರುವ 'ರಂಗ ಕೊಳಲನೂದಲಾಗ' ಎಂಬ ಗೀತ 'ಪ್ರಸನ್ನ ವೆಂಕಟ' ಎಂಬ ಅಂಕಿತವನ್ನು ಹೇಗೆ ಪಡೆದಿದೆಯೋ—ಏಕೆ ಪಡೆದಿದೆಯೋ ! ಉತ್ತರ ಕರ್ನಾಟಕದಲ್ಲಿ ಬಹಳ ಜನರು, ಈ ಗೀತವನ್ನು 'ಪ್ರಸನ್ನವೆಂಕಟ' ಎಂಬ ಅಂಕಿತವನ್ನು ಅಳವಡಿಸಿಯೇ ಹಾಡುತ್ತಾರೆ; ಆದರೆ ನಮಗೆ ದೊರೆತ ಪ್ರಾಚೀನ ಹಸ್ತಪ್ರತಿಗಳಲ್ಲಿ ಈ ಗೀತದ ಕೊನೆಗೆ 'ಪುರಂದರ ವಿಠಲ' ಎಂಬ ಅಂಕಿತವಿರುವುದರಿಂದ, ಅದನ್ನು ಇಲ್ಲಿ ತೆಗೆದುಕೊಳ್ಳಲಾಗಿದೆ.

'ನಳಿನಜಾಂಡ ತಲೆಯದೂಗೆ
ಇಳೆಯು ನಲಿದು ಮೋಹಿಸುತಿರಲು
ಕೊಳಲು ಪಿಡಿದು ಬಾರಿಸಿದನು
ಚೆಲುವ ಕೃಷ್ಣರಾಯನು ||'

ಎಂಬ ವೇಣುಗೀತವು ಹೊಸತಾಗಿಯೆ ದೊರೆತುದು. ಇದುವರೆಗೆ ಅದು ಅಪ್ರಕಟಿತ.

'ಗೋಕುಲನಿರ್ಗಮನ' ಎಂಬ ಭಾಗದ ಗೀತಗಳಲ್ಲಿ ಹೊರಹೊಮ್ಮಿರುವ ಕರುಣಾಭಾವವು ಭಕ್ತನ ಭಕ್ತಿಭಾವವನ್ನು, ರಮಣೀಯ ರೀತಿಯಿಂದ ಪರಿಪೋಷಿಸಿರುವುದು.

"ಆರೇ ರಂಗನ ಆರೇ ಕೃಷ್ಣನ
ಆರೇ ರಂಗನ ಕರೆಯ ಬಂದವರು?"

"ಅಕ್ಕ ನಂದಗೋಪನ ಅರಮನೆಯೊಳಗೊಬ್ಬ
ಅಕ್ರೂರ ಬಂದನಂತೆ"

"ಎಲ್ಲಿಯ ಮಥುರಾಪುರವು ಎಲ್ಲಿಯ ತಾ ಬಿಲ್ಲುಹಬ್ಬ
ಎಲ್ಲಿಯ ಸೋದರಮಾವನೆ"

"ಎಲ್ಲಿಯ ಮಲ್ಲರ ಸಂಗ, ಖುಲ್ಲಕಂಸನು ನಮಗೆ
ಎಲ್ಲಿಯ ಜನ್ಮದ ವೈರಿಯೆ!"

"ವಾಸಕೆ ಯೋಗ್ಯವಲ್ಲ ಗೋಕುಲವಿನ್ನು
ಬೇಸರವಾಯಿತಲ್ಲ!

ಇವೇ ಮೊದಲಾದ ಗೀತಗಳು, ರಸಿಕರ ಕರುಳನ್ನು ಕರಗಿಸುವಂತಿವೆ. ಮುಂದೆ ಶ್ರೀಕೃಷ್ಣನು, ಉದ್ಧವನನ್ನು ಗೋಕುಲಕ್ಕೆ ಕಳುಹಿದಾಗ, ಗೋಪಿಯರೆಲ್ಲರೂ ಸೇರಿ:

"ಏಕೆ ವೃಂದಾವನವು ಸಾಕು ಗೋಕುಲವಾಸ
ಏಕೆ ಬಂದೆಯೊ ಉದ್ಧವಾ!
ಸಾಕು ಸ್ನೇಹದ ಮಾತನೇಕ ಮಹಿಮನು ತಾನು
ಆ ಕುಬುಜೆಯನು ಕೂಡಿದ—ಉದ್ಧವಾ! || ಪಲ್ಲ ||

ಎಂಬ ಗೀತವಂತೂ ಕರುಣಾಭಾವದ ಶಿಖರದ ಸ್ವರ್ಣಕಲಶ, ಇವು ಗಳನ್ನು ಹಾಡಿ, ಹಾಡಿಸಿ ಕೇಳಿ, ಭಾವಾನಂದವನ್ನು ಪಡೆಯಬೇಕು. 'ವಿವಿಧ ಭಾವಲೀಲೆ'ಯಲ್ಲಿ ಬಂದಿರುವ ನಿಂದಾಸ್ತುತಿ, ವ್ಯಂಗ್ಯ ವಚನಗಳು, ಪುರಂದರ ದಾಸರು ದೇವರ ವಿಷಯದಲ್ಲಿ ಇರಿಸಿಕೊಂಡ ಸಲುಗೆಗೆ ನಿದರ್ಶಕವಾಗಿವೆ.

ಶ್ರೀಕೃಷ್ಣಲೀಲೆಗೆ ಸಂಬಂಧಿಸಿದ ಶ್ರೀಪುರಂದರದಾಸರ ಪದಗಳು ಇಷ್ಟೇ ಏನು ?—ಎಂದು ಯಾರಾದರೂ ಕೇಳಬಹುದು. ಅವರಿಗೆ ನಮ್ಮ ಉತ್ತರವಿಷ್ಟು : 'ನಮ್ಮ ಸಂಶೋಧನೆಯ ಜರಡಿಯಲ್ಲಿ ಸೋಸಿಕೊಂಡು ಉಳಿದುವಿಷ್ಟು: ಸಂಶೋಧನೆಯ ಕಾರ್ಯ ಮುಂದುವರಿದರೆ ಇನ್ನೂ ಕೆಲವು ಗೀತಗಳು ಸಿಕ್ಕಬಹುದು' ಎಂದು. ಈಗ ಪ್ರಚಾರದಲ್ಲಿರುವ ಕೃಷ್ಣಲೀಲೆಗೆ ಸಂಬಂಧಿಸಿದ ಹಲವಾರು ಗೀತಗಳು, ನಿಜವಾಗಿ ಪುರಂದರದಾಸರ ಕೃತಿಗಳಲ್ಲ. ಅವೆಲ್ಲ ಆಧುನಿಕ ಜನರಚಿತವೆಂಬುದು, ಪ್ರಮಾಣಗಳೊಂದಿಗೆ ನಮಗೆ ಕಂಡು ಬಂದಿದೆ.

ಈ ಸಂಕಲನಕ್ಕಾಗಿ ಇಂಗ್ಲಿಷ್ ಭಾಷೆಯಲ್ಲಿ ವಿಸ್ತಾರವಾದ ಮುನ್ನುಡಿ ಯನ್ನು ಬರೆದು ಕೊಟ್ಟಿರುವ ಪ್ರೊ. ಸತ್ಯನಾರಾಯಣ ಅವರ ಉಪಕಾರ ಸಂಸ್ಮರಣೀಯವಾದುದು. ಉಗಾಭೋಗ ಮತ್ತು ಸುಳಾದಿ ಎಂಬ ಸಂಗೀತ ಪ್ರಕಾರಗಳ ಸಂಶೋಧನಾತ್ಮಕ ಚರಿತ್ರೆಯೆ ಆ ಮುನ್ನುಡಿಯಲ್ಲಿ ಬಂದಿರು ವುದು. 'ಉಗಾಭೋಗ' ಮತ್ತು 'ಸುಳಾದಿ' ಶಬ್ದಗಳಿಗೆ ಏನೇನೋ ವ್ಯುತ್ಪತ್ತ್ಯರ್ಥವನ್ನು ಹಚ್ಚಿ ಹೇಳುವ ಪರಂಪರೆಯ ಅವ್ಯುತ್ಪನ್ನಬುದ್ಧಿಗೆ ಇವರ ಮುನ್ನುಡಿಯು ಸತ್ಯದರ್ಶನ ದೃಷ್ಟಿಯನ್ನು ಕೊಡಬಲ್ಲುದು.

ಇದರೊಂದಿಗೆ ನಮ್ಮ ಐದನೆಯ ಸಂಕಲನವಾದ 'ಲೋಕನೀತಿ'ಯೂ ಕನ್ನಡಿಗರ ಕೈಗೆ ಸಿಕ್ಕುವುದು. ಇವುಗಳ ಪ್ರಕಟನೆಗೆ ಹಣವಿಲ್ಲದೆ ನಮ್ಮ ಸಮಿತಿಯು ಪೇಚಾಡುತ್ತಿರುವಾಗ, ದಿಲ್ಲಿಯ ಕೇಂದ್ರಸರಕಾರವು ಹಣದ ನೆರವನ್ನು ಕೊಡುವುದಾಗಿ ಆಶ್ವಾಸನವಿತ್ತಿತು; ಅರ್ಧದಷ್ಟು ಹಣವನ್ನು ಸಕಾಲದಲ್ಲಿಯೇ ಸಲ್ಲಿಸಿರುವುದಲ್ಲದೆ, ಉಳಿದುದನ್ನೂ ತನ್ನ ನಿಯಮಾನು ಸಾರವಾಗಿ ತಕ್ಕ ಸಮಯದಲ್ಲಿ ಕೊಡುವುದಾಗಿ ತಿಳಿಸಿರುವುದು. ಈ ಹಣದ ಬಲದಿಂದಲೇ ಇವೆರಡು ಸಂಕಲನಗಳು ಬೆಳಕನ್ನು ಕಂಡಿರುತ್ತವೆ. ಆದುದ ರಿಂದ ಕೇಂದ್ರ ಸರಕಾರಕ್ಕೆ ದಾಸಸಾಹಿತ್ಯಾಭಿಮಾನಿಗಳೆಲ್ಲರೂ ಕೃತಜ್ಞತೆ

ಗಳನ್ನು ಸಲ್ಲಿಸಬೇಕಾಗಿದೆ. ಕೇಂದ್ರ ಸರಕಾರದ ಸಹಾಯಧನವು ಸಿಕ್ಕು ವಂತೆಯೂ, ಅದು ಬೇಗನೆ ನಮ್ಮ ಕೈಗೆ ದೊರೆಯುವಂತೆಯೂ ಅತ್ಯಂತ ಆತ್ಮೀಯತೆಯಿಂದ ಕಾರ್ಯ ಮಾಡಿದ ಶ್ರೀಮತಿ ಸರೋಜಿನಿ ಮಹಿಷಿ ಎಂ.ಪಿ. ಅವರ ಉಪಕಾರವೂ ಘನವಾದುದು. ಅವರ ಪ್ರಯತ್ನವಿಲ್ಲದೆ ಹೋಗಿದ್ದರೆ, ಈ ಸಂಕಲನಗಳು ಇಷ್ಟರಲ್ಲಿಯೇ ಬೆಳಕನ್ನು ಕಾಣುವ ಸಂಭವವೇ ಇರಲಿಲ್ಲ ವೆಂದು ಹೇಳಬಹುದು. ಶ್ರೀಮತಿ ಸರೋಜಿನಿ ಮಹಿಷಿಯವರಿಗೆ ನಮ್ಮ ಹೃತ್ಪೂರ್ವಕ ಅಭಿನಂದನೆಗಳು. ಇವೆರಡೂ ಸಂಕಲನಗಳ ಮುದ್ರಣ-ಕಾರ್ಯವನ್ನು ಕೈಕೊಂಡು, ತಮ್ಮ ಕಾರ್ಯವೇ ಎಂಬ ಅಭಿಮಾನದಿಂದ ಅಂದವಾಗಿ ಮುದ್ರಿಸಿಕೊಟ್ಟು, ಪ್ರತಿಭಾ ಮುದ್ರಣದ ಒಡೆಯರಾದ ಶ್ರೀ ಭಾಲಚಂದ್ರ ಘಾಣೇಕರ ಅವರೂ ನಮಗೆ ಉಪಕಾರ ಮಾಡಿದ್ದಾರೆ. ಅವರಿಗೂ ನಮ್ಮ ಧನ್ಯವಾದಗಳು.

ಆರನೆಯ ಸಂಕಲನವಾದ 'ಸಂಕೀರ್ಣಸಂಗ್ರಹ'ದ ಮುದ್ರಣ-ಕಾರ್ಯವೂ ನಡೆದಿದೆ. ಅದು ಕೂಡ ಬೇಗನೆ ಕನ್ನಡಿಗರಿಗೆ ದೊರೆಯುವು ದೆಂದು ನಮ್ಮ ನಂಬುಗೆ.

ಧಾರವಾಡ<br>ದಿನಾಂಕ ೮–೬–೧೯೭೫<br>ಜ್ಯೇಷ್ಠ ಶುಕ್ಲ ನವಮಿ

**ಬೆಟಗೇರಿ ಕೃಷ್ಣಶರ್ಮಾ**<br>**ಬೆಂಗೇರಿ ಹುಚ್ಚರಾಯ**

# ಪ್ರಕಾಶಕರ ಮಾತು

ಈ 'ಕೃಷ್ಣಲೀಲೆ'ಯು ಪುರಂದರದಾಸರ ಸಾಹಿತ್ಯದ ನಾಲ್ಕನೆಯ ಗ್ರಂಥವು. ಇದು ವಾಚಕರ ಕೈಸೇರುತ್ತಿರುವದು ಆನಂದದ ಸಂಗತಿಯು. ದಾಸವರ್ಯರು ಪರಮಾತ್ಮನ ಲೀಲೆಗಳನ್ನು ಭಕ್ತಿಪರವಶರಾಗಿ ಮನದುಂಬಿ ಹಾಡಿದುದನ್ನು ಇಲ್ಲಿ ಕಾಣುತ್ತೇವೆ. ಭಕ್ತಿರಸವು ಇಲ್ಲಿ ಹೊಳೆಯಾಗಿ ಹರಿವ ಸುಂದರದೃಶ್ಯವು ಕಾಣುತ್ತದೆ. ವಾಚಕರು ಈ ಭಕ್ತಿಸಾಗರದಲ್ಲಿ ಮಿಂದು ಭಾವಪರವಶರಾಗುವುದರಲ್ಲಿ ಸಂದೇಹವಿಲ್ಲ.

ಈ ಗ್ರಂಥಕ್ಕೆ ಇಂಗ್ಲಿಷ್ ಮುನ್ನುಡಿಯನ್ನು ಬರೆದ ಪ್ರೊ. ಸತ್ಯನಾರಾಯಣರವರು ಸಂಗೀತಶಾಸ್ತ್ರಜ್ಞರು; ಸಂಗೀತಗಾರರು; ದಾಸರಲ್ಲಿ ಅಪಾರ ಶ್ರದ್ಧೆ ಭಕ್ತಿಯುಳ್ಳವರು. ಸಂಗೀತಶಾಸ್ತ್ರಕ್ಕೆ ಪುರಂದರದಾಸರು ನೀಡಿದ ಕಾಣಿಕೆಯನ್ನು ಶಾಸ್ತ್ರೀಯವಾಗಿ ಸುಂದರವಾಗಿ ಮುನ್ನುಡಿಯಲ್ಲಿ ವಿವೇಚಿಸಿ, ಹೊಸ ಬೆಳಕನ್ನು ಬೀರಿದ್ದಾರೆ. ದಾಸರ ಸ್ಥಾನವನ್ನು ಎತ್ತಿ ತೋರಿಸಿದ್ದಾರೆ. ಈ ವಿದ್ವಾಂಸರ ಉಪಕಾರವನ್ನು ಕಮಿಟಿಯು ಎಂದೂ ಮರೆಯುವುದು ಶಕ್ಯವಿಲ್ಲ.

ಈ ಗ್ರಂಥಕ್ಕೆ ಬೇಕಾಗುವ ಪಡಿಯಚ್ಚುಗಳಿಗಾಗಿ ಚಿತ್ರಗಳನ್ನು ಒದಗಿಸಿ ಕೊಟ್ಟ ಕನ್ನಡ ಸಂಶೋಧನ ಸಮಿತಿಯ ಅಧಿಕಾರಿಗಳಿಗೂ ಶ್ರೀ ಡಿ. ಎನ್. ಕೋನೇರಿ ಅವರಿಗೂ ನಮ್ಮ ಕಮಿಟಿಯು ಹೃತ್ಪೂರ್ವಕ ಕೃತಜ್ಞತೆಗಳನ್ನು ಸಲ್ಲಿಸುತ್ತದೆ. ಅಲ್ಲದೆ ಇದನ್ನು ಅಂದವಾಗಿ ಮುದ್ರಿಸಿ ಕೊಟ್ಟ ಪ್ರತಿಭಾ ಮುದ್ರಣಾಲಯದವರಿಗೂ, ಪರಿಶ್ರಮಪೂರ್ವಕವಾಗಿ ಸಂಶೋಧಿಸಿ ಗ್ರಂಥವನ್ನು ಸಿದ್ಧಪಡಿಸಿದ ಸಂಪಾದಕರಿಗೂ ಕಮಿಟಿಯು ಧನ್ಯವಾದಗಳನ್ನರ್ಪಿಸುತ್ತದೆ.

ಧಾರವಾಡ
ತಾ. ೧೧ – ೬ – ೧೯೬೫

ಬುರ್ಲಿ ಬಿಂದುಮಾಧವ

# ಆಧಾರಗ್ರಂಥಗಳು


೧ ಭಾರತೀಯ ಪ್ರಾಚೀನ ಚರಿತ್ರಕೋಶ (ಮರಾಠಿ)
ಸಿದ್ಧೇಶ್ವರಶಾಸ್ತ್ರಿ ಚಿತ್ರಾವ

೨ ಪುರಾಣನಾಮ ಚೂಡಾಮಣಿ (ಕನ್ನಡ) [ಪಾನ್ಯಂ ಸುಂದರಶಾಸ್ತ್ರಿ
ಬೆನಗಲ್ ರಾಮರಾಯರು]

೩ ಭಾಗವತ (ಕಲ್ಯಾಣಸಂಪುಟ)

೪ ಭಾರತ (ಕುಂಭಕೋಣಂ ಸಂಪುಟ)

೫ ಭಾರತ ತಾತ್ಪರ್ಯನಿರ್ಣಯ (ಉಡುಪಿ)

೬ ರಾಮಾಯಣ (ಕಲ್ಯಾಣಸಂಪುಟ)

೭ ತೀರ್ಥಾಂಕ (ಕಲ್ಯಾಣ)

೮ ಪುರಾಣಗಳು—ಇದರಲ್ಲಿಯ ಪ್ರಮಾಣಗಳನ್ನೆಲ್ಲ ಭಾರತೀಯ-
ಪ್ರಾಚೀನ ಚರಿತ್ರಕೋಶದಿಂದ ತೆಗೆದುಕೊಂಡಿದೆ.

೯ ವಾಯುಸ್ತುತಿ (ಶ್ರೀತ್ರಿವಿಕ್ರಮ ಪಂಡಿತಾಚಾರ್ಯಕೃತ)

೧೦ ಮಧ್ವವಿಜಯ (ಶ್ರೀನಾರಾಯಣ ಪಂಡಿತಾಚಾರ್ಯಕೃತ)

೧೧ ದ್ವಾದಶಸ್ತೋತ್ರ (ಶ್ರೀಮಧ್ವಾಚಾರ್ಯಕೃತ)

೧೨ ತಂತ್ರಸಾರ ( " " )

೧೩ ಭಗವದ್ಗೀತೆ

೧೪ ನಾರದ ಭಕ್ತಿಸೂತ್ರಗಳು

೧೫ ಸಂಗೀತ (South Indian Music I—V. P. Sambamurti)

೧೬ ಕುಮಾರವ್ಯಾಸನ ಭಾರತ

೧೭ Epigraphia–Indica Vol XXXI July 1955

೧೮ ಹರಿಕಥಾಮೃತಸಾರ (ವರದೇಂದ್ರ ಹರಿದಾಸ ಸಾಹಿತ್ಯಮಂಡಳ
ಲಿಂಗಸೂಗೂರು)

೧೯ ವಿಜಯದಾಸರ ಸುಳಾದಿ " " "

೨೦ ದಶೋಪನಿಷತ್ತುಗಳು



ಗೋವರ್ಧನೋದ್ಧಾರ ( ಹಳೆಬೀಡು )

[ಕ. ಸಂ. ಸಂಸ್ಥೆಯ ಕೃಪೆ]

# ೧ ಗೋಕುಲಭಾಗ್ಯ

## ೧

ರಾಗ— ಜಿಂಜೋಟಿ                    ತಾಳ— ರೂಪಕ

೧ ರಾಮು-ಕೃಷ್ಣರು ಮನೆಗೆ ಬಂದರು ಬಾಗಿಲ ತೆರೆಯಿರೊ ।
ಕಾಮಧೇನು ಬಂದಂತಾಯಿತು ಸುಖವ ಸುರಿಯಿರೊ ॥ ಪ ॥

ಮಕರಕುಂಡಲ ನೀಲಮುತ್ತಿನ ಚೌಕಳಿ ಇಡುತಲಿ ।
ಸುಕುಮಾರ ಸುಂದರವಾದ ಉಡುಗೆಯುಡುತಲಿ ॥
ಮುಖದ ಕಮಲ ಮುಗುಳುನಗೆಯ ಸುಖವ ಕೊಡುತಲಿ ।
ಕಂಕಣಹಾರ ತೋಳಬಂದಿ ತೊಡಿಗೆ ತೊಡುತಲಿ ॥ ೧ ॥

ಚೆಂಡು-ಬೊಗರಿ-ಚಿಣ್ಣಿಕೋಲು-ಗಜುಗವಾಡುತ ।
ದುಂಡುಮಲ್ಲಿಗೆ ತುರುಬಿ ಕೊಳಲನೂದಿ ಪಾಡುತ ॥
ಮಿಂಡೆಪೆಂಗಳ ಮುದ್ದುಮೊಗದ ಸೊಗವ ನೋಡುತ ।
ಭಂಡುಮಾಡಿ ಭಾಮೆಯರೊಡನೆ ಸರಸವಾಡುತ ॥ ೨ ॥

ಪೊಕ್ಕುಳಲ್ಲಿ ಅಜನ ಪಡೆದ ದೇವದೇವನು ।
ಚಿಕ್ಕ ಉಂಗುಟದಿ ಗಂಗೆಯ ಪಡೆದನಾತನು ॥
ಮಕ್ಕಳ ಮಾಣಿಕ್ಯ ಪುರಂದರವಿಠಲರಾಯನು ।
ಭಕ್ತಜನರಿಗೊಲಿದ ನೀನು ಮುಕ್ತಿದಾತನು ॥ ೩ ॥

---

೧ ಅ (VI) ನು ಪ್ರತಿಗಳಿಂದ ತೆಗೆದುಕೊಂಡಿದೆ.

೨

ರಾಗ—ಸಾರಂಗ ತಾಳ—ಏಕ

೧ ಗೋಪಿಯ ಭಾಗ್ಯವಿದು ।
ಆ ಪರಮಾತ್ಮನ ಅಪ್ಪಿ ಮುದ್ದಿಡುವುದು ॥ ಪ ॥

ಅಂಬೆಗಾಲಿಡು ಹರಿ ಕುಣಿದಾಡೈ ತೋ- ।
ಳಂಬಲಿ ತಾ ಹೊಂಗುಬ್ಬಿಯನು ॥
ಅಂಬುಜನಾಭ ನೀನಾನೆಯನಾಡೆಂದು ।
ಸಂಭ್ರಮದಿಂದ ಮುದ್ದಾಡುವಳೊ ॥ ೧ ॥

ನಿತ್ಯನಿರ್ಮಲನಿಗೆ ನೀರನೆರೆದು ತಂದು ।
ಎತ್ತಿ ತೊಡೆಯೊಳಿಟ್ಟು ಮುದ್ದಿಸುತಾ ॥
ಸತ್ಯಲೋಕವನಾಳುವ ವಿಧಿಜನಕನ ।
ಪುತ್ರನೆಂದರಿತು ತಕ್ಕೈಸುವಳೊ ॥ ೨ ॥

ಪಾಲುಗಡಲು ಮನೆಯಾಗಿ ಮೂಲೋಕವ ।
ಪಾಲಿಸುತಿಪ್ಪ ನಾರಾಯಣನ ॥
ಕಾಲ ಮೇಲೆ ಮಲಗಿಸಿ ಬಟ್ಟಲ ತುಂಬ
ಹಾಲು ಕುಡಿಸಿ ಸಂತೈಸುವಳೊ ॥ ೩ ॥

ಹರಿ ನಿತ್ಯ ತೃಪ್ತನೆಂದರಿಯದೆ ಹೊನ್ನಿನ ।
ಹರಿವಾಣದೊಳಗೆ ಮೃಷ್ಟಾನ್ನವನು ॥
ನೊರೆಹಾಲು ಘೃತ-ಸಕ್ಕರೆ ಕೂಡಿಸಿ ಕರೆ- ।
ಕರೆದು ಉಣಿಸಿ ತೃಪ್ತಿಬಡಿಸುವಳೊ ॥ ೪ ॥

---

೧ ಇ ಪ್ರತಿಯಿಂದ ತೆಗೆದುಕೊಂಡಿದೆ.

ಅಂಗಜಪಿತನಿಗೆ ಮೋಹದಿಂದ ಹೊಸ ।
ಅಂಗಿಯ ತೊಡಿಸಿ ಟೊಪ್ಪಿಗೆ ಇರಿಸಿ ॥
ಬಂಗಾರದರಳೆಲೆ ಬಿಂದುಲಿಗಳನಿಟ್ಟು ।
ಸಿಂಗರವನು ಮಾಡಿ ನೋಡುವಳೊ ॥ ೫ ॥

ದೃಷ್ಟಿಯು ತಾಗೀತೆಂದಿಟ್ಟು ಅಂಗಾರವ ।
ತಟ್ಟೆಯೊಳಾರತಿಗಳ ಬೆಳಗಿ ॥
ಥಟ್ಟನೆ ಉಪ್ಪು-ಬೇವುಗಳ ನಿವಾಳಿಸಿ ।
ತೊಟ್ಟಲೊಳಿಟ್ಟು ಮುದ್ದಾಡುವಳೊ ॥ ೬ ॥

ನಮ್ಮಪ್ಪ ರಂಗಯ್ಯ ಅಳಬೇಡವೊ ದೊಡ್ಡ
ಗುಮ್ಮ ಬಂದಿದೆ ಸುಮ್ಮನಿರು ಎನುತ ॥
ಅಮ್ಮಿಯನೀಯುತ ಅಮರರನಾಳ್ದನ ।
ರಮ್ಮಿಸಿ ರಮ್ಮಿಸಿ ಮುದ್ದಾಡುವಳೊ ॥ ೭ ॥

ಏಸೊ ಬೊಮ್ಮಾಂಡವ ರೋಮದೊಳಿರಿಸಿದ ।
ವಾಸುದೇವನನೆತ್ತಿಕೊಂಬುವಳೊ ॥
ನಾಶರಹಿತನಾಯುಷ್ಯ ಹೆಚ್ಚಲೆಂದು ।
ರಾಶಿದೈವಕೆ ತಾ ಬೇಡಿಕೊಂಬುವಳೊ ॥ ೮ ॥

ಮಾಧವ ಬಾ ಮಧುಸೂದನ ಬಾ ಬ್ರ- ।
ಹ್ಮಾದಿವಂದಿತ ಹರಿ ಬಾಯೆನುತ ॥
ಆದಿಮೂರುತಿ ಶ್ರೀಪುರಂದರವಿಠಲನ ।
ಆದರದಲಿ ಮುದ್ದಾಡುವಳೊ ॥ ೯ ॥

## ೩

ರಾಗ—ಶಂಕರಾಭರಣ ತಾಳ—ಆದಿ

೧ ಜಗದುದ್ಧಾರಕ ತನ್ನ ಮಗನೆಂದು ಬಗೆದು ।
ನಿಗಮಗೋಚರನ ಆಡಿಸಿದಳು ಯಶೋದೆ ॥ ಪ ॥

೨ ವಟದೆಲೆಯ ಮೇಲುಸಂಪುಟದ ಮೇಲೊರಗಿ ಉಂ-
ಗುಟವ ಪೀರುವನ—ಆಡಿಸಿದಳು ॥ ೧ ॥

೩ ವಿಶ್ವತಶ್ಚಕ್ಷುವ ವಿಶ್ವತೋಮುಖನ ।
ವಿಶ್ವವ್ಯಾಪಕನ—ಆಡಿಸಿದಳು ॥ ೨ ॥

೪ ಅಣೋರಣಿಯನ ಮಹತೋಮಹೀಯನ ।
ಗಣನೆಯಿಲ್ಲದವನ—ಆಡಿಸಿದಳು ॥ ೩॥

೫ ನಿಗಮಕೆ ಸಿಲುಕದ ಅಗಣಿತ ಮಹಿಮನ ।
ಮಗುಗಳ ಮಾಣಿಕ್ಯನ—ಆಡಿಸಿದಳು । ॥ ೪ ॥

೬ ಎಲ್ಲರೊಳು ಭರಿತನಾಗಿ ಇಪ್ಪ ಲಕುಮಿಯ ।
ವಲ್ಲಭ ಪುರಂದರವಿಠಲನ—ಆಡಿಸಿದಳು ॥ ೫ ॥

---

೧ ಅ (ಲ) ರಲ್ಲಿ ಮಾತ್ರ ಈ ಹಾಡು ದೊರಕುತ್ತಿದೆ.

೨ ಏಕೋ ನಾರಾಯಣೋ ಆಸೀ- ।
ನ್ನ ಬ್ರಹ್ಮಾನಚ ಶಂಕರಃ ॥ (ಭಾ. ತಾ. ೨೧–೬೩)

೩ ವಿಶ್ವತಶ್ಚಕ್ಷುರುತ ವಿಶ್ವತೋಮುಖೋ ।
ವಿಶ್ವತೋ ಬಾಹುಃ ॥

೪ ಅಣೋರಣೀಯಾನ್ ಮಹತೋ ಮಹೀಯಾನ್ (ಕಾಠಕ ಉ.)

೫ ಯತೋ ವಾಚೋ ನಿವರ್ತಂತೇ ಅಪ್ರಾಪ್ಯ ಮನಸಾಸಹ ॥

೬ ಅಂತರ್ಬಹಿಶ್ಚ ತತ್ಸರ್ವಂ ವ್ಯಾಪ್ಯ ನಾರಾಯಣಃ ಸ್ಥಿತಃ ॥

೪

ರಾಗ—ಮೋಹನ ತಾಳ—ಅಟ

೧ ಮಗನೆಂದಾಡಿಸುವಳು ।
ಮೊಗನೋಡಿ ನಗುವಳು ॥ ಪ ॥

ಜಗದುದರನ ತನ್ನ ಮಗನೆಂದೆನಿಸಿಕೊಂಡು ।
ಬಿಗಿದಪ್ಪುವ ಪುಣ್ಯವೆಲ್ಲಿ ಪಡೆದಳೊ? ॥ ಅ. ಪ ॥

ಶಶಿಧರ ಬ್ರಹ್ಮ ಸುರಾಸುರ ಮುನಿಗಳು ।
ವಸುಮತಿ ಸಹಿತ ಉದರದಲ್ಲಿಹ ॥
ಶಶಿಮುಖಿ ಸಾಸಿರ ಪೆಸರುಗಳವನಿಗೆ ।
ಹೆಸರನಿಡುವ ಪುಣ್ಯವೆಲ್ಲಿ ಪಡೆದಳೊ? ॥ ೧ ॥

ಸಾಗರಪತಿಯಾದ ಭೋಗಿಶಯನನನು ।
ಯೋಗನಿದ್ರೆಯೊಳಿಪ್ಪ ದೇವನನು ॥
ಆಗಮತತಿಗಳಿಂದರಸಿ ಕಾಣದವನ ।
ತೂಗಿ ಪಾಡುವ ಪುಣ್ಯವೆಲ್ಲಿ ಪಡೆದಳೊ ? ॥ ೨ ॥

ಪೊನ್ನಮಣೆಯ ಮೇಲೆ ಚಿಣ್ಣನ ಕುಳ್ಳಿರಿಸಿ ।
ಎನ್ನ ಮುದ್ದು ಮೋಹನ ಬಾ ಎನುತ ॥
ಹೊನ್ನು ತಾ ಗುಬ್ಬಿ ತಾ ಹೊನ್ನು ತಾ ಎನ್ನುತ ।
ಬಣ್ಣಿಸಿಯಾಡುವ ಪುಣ್ಯವೆಲ್ಲಿ ಪಡೆದಳೊ? ॥ ೩ ॥

ಕಾಲಲಂದುಗೆ ಕಂಕಣ ಸಣ್ಣ ಉಲಿಗೆಜ್ಜೆ ।
ಮಾಲೆ ಅರಳೆಲೆ ಕೊರಳಪದಕ ॥
ಬಾಲಮುಡಿಗೆಯಿಟ್ಟು ಬಾಲನ ಎತ್ತಿಕೊಂಡು ।
ಪಾಲ ಕುಡಿಸುವ ಪುಣ್ಯವೆಲ್ಲಿ ಪಡೆದಳೊ? ॥ ೪ ॥

೧ ಇ ಪ್ರತಿಯಿಂದ ತೆಗೆದುಕೊಂಡಿದೆ.

ಪಣೆಗೆ ತಿಲಕವನಿಟ್ಟು ಕೊರಳ ಪದಕಹಾರ ।
ಮಣಿಕಂಕಣವು ಘಳಿಘಳಿರೆನಲು ॥
ಫಣಿಪತಿಶಯನನ ಕುಣಿಯೊ ಕುಣಿಯೊ ಎಂದು ।
ಕುಣಿಸಿ ನೋಡುವ ಪುಣ್ಯವೆಲ್ಲಿ ಪಡೆದಳೊ ? ॥ ೫ ॥

ವೇದತತಿಗಳಿಗೆ ಅಗೋಚರನಾದ ಸ- ।
ಮ್ಮೋದ ಸಮ್ಮೋಹಕನ ॥
ಬೀದಿಯೊಳಾಡುವ ಮಗನ ಕರೆತಂದು ವಿ- ।
ನೋದವಾಡುವ ಪುಣ್ಯವೆಲ್ಲಿ ಪಡೆದಳೊ ? ॥ ೬ ॥

ಕುಕ್ಷಿಯೊಳಿರೇಳು ಭುವನಗಳನು ತಾಳಿ ।
ರಕ್ಷಿಸಿಕೊಂಡಿಪ್ಪ ಬಲವಂತನ ॥
ಪಕ್ಷಿವಾಹನದೇವ ಅಂಜಿದ ಅಂಜಿದನೆಂದು ।
ರಕ್ಷೆಯಿಡುವ ಪುಣ್ಯವೆಲ್ಲಿ ಪಡೆದಳೊ ? ॥ ೭ ॥

ಒಣಗಿದ ತನು ತಲೆಜಡೆ ಕಣ್ಣಮುಚ್ಚುತ ।
ಪ್ರಣವದ ಜಪಮಣಿ ಮಾಲೆಗಳ ॥
ಎಣಿಪ ಯೋಗಿಸಮೂಹವರಸಿ ಕಾಣದವನ ।
ಅಣಕವಾಡುವ ಪುಣ್ಯವೆಲ್ಲಿ ಪಡೆದಳೊ ? ॥ ೮ ॥

ಬಿಡು ಬಿಡು ಬಾಲಕ ನಿಲ್ಲು ನಿಲ್ಲೊ ಎಂದು ।
ಕುಡಿಬೆರಳಿಂದ ಕರವನು ಪಿಡಿದು ॥
ಅಡಿಯಿಡು ಮಗನೆ ಒಂದಡಿಯಿಡೊ ಎನುತಲಿ ।
ನಡೆಸಿ ನೋಡುವ ಪುಣ್ಯವೆಲ್ಲಿ ಪಡೆದಳೊ ? ॥ ೯ ॥

ಬಲಿಯ ಗೃಹಕೆ ಪೋಗಿ ತ್ರಿವಿಕ್ರಮ ರೂಪನಾಗಿ ।
ನೆಲವ ಈರಡಿ ಮಾಡಿದ ದೇವನ ॥
ಲಲನೆ ತೊಡೆಯೊಳಿಟ್ಟು ತಲೆಯ ನೇವರಿಸುತ ।
ಮೊಲೆಯನುಣಿಸುವ ಪುಣ್ಯವೆಲ್ಲಿ ಪಡೆದಳೊ ? ॥ ೧೦ ॥

ಮಂದಗಮನೆ ಜಗದ್ವಂದ್ಯನ ಕುಳ್ಳಿರಿಸಿಕೊಂಡು ।
ಕುಂದದೆ ಜಯಜಯವೆನುತಲಿರೆ ॥
ಮಂದರೋದ್ಧರ ಶ್ರೀಪುರಂದರವಿಠಲನ ।
ಬಂದಪ್ಪುತಿಹ ಪುಣ್ಯವೆಲ್ಲಿ ಪಡೆದಳೊ? ॥ ೧೧ ॥

*

ರಾಗ—ರೇಗುಪ್ತಿ ತಾಳ—ಅಟ

೧ ನಿನ್ನ ಮಗನೇನೇ ಗೋಪಿ—ಗೋಪಮ್ಮ ।
ನಿನ್ನ ಮಗನೇನೆ ಗೋಪಿ? ॥ ಪ ॥

ಚೆನ್ನಾರ ಚೆಲುವ ಉಡುಪಿಯ ಕೃಷ್ಣ ಬಾಲ ।
ನಿನ್ನ ಮಗನೇನೆ ಗೋಪಿ? ॥ ಅ. ಪ. ॥

ಕಟವಾಯ ಬೆಣ್ಣೆ ಕಾಡಿಗೆಗಣ್ಣು ಕಟಿಸೂತ್ರ ।
ಪಟವಾಳಿ ಕೈಪ ಕೊರಳೊಳು ಪದಕ ॥
ಸಟೆಯಲ್ಲ ಬ್ರಹ್ಮಾಂಡ ಹೃದಯದೊಳಿರುತಿರಲು ।
ಮಿಟಿಮಿಟಿ ನೋಡುವ ಈ ಮುದ್ದು ಕೃಷ್ಣ ॥ ೧ ॥

ಮುಂಗುರುಳ ಮುಂಜೆಡೆ ಬಂಗಾರದರಳೆಲೆ ।
ರಂಗುಮಾಣಿಕದ ಉಂಗುರವಿಟ್ಟು ॥
ಪೊಂಗೆಜ್ಜೆ ಕಾಲಲಂದುಗೆ ಘಿಲ್ಲುಘಿಲ್ಲೆನುತ ।
ಅಂಗಳದೊಳಗಾಡುತಿಹ ಮುದ್ದು ಕೃಷ್ಣ ॥ ೨ ॥

ಹರಿವ ಹಾವನೆ ಕಂಡು ಹೆಡೆಹಿಡಿದು ಆಡುವ ।
ಕರುವಾಗಿ ಆಕಳ ಮೊಲೆಯುಣ್ಣುವ ॥
ಅರಿಯದಾಟವ ಬಲ್ಲ ಅಂತರಂಗದ ಸ್ವಾಮಿ ।
ಧರೆಯೊಳಧಿಕನಾದ ಪುರಂದರವಿಠಲಯ್ಯ ॥ ೩ ॥

೧ ಅ (೧) ಪ್ರತಿಯಲ್ಲಿಯಷ್ಟೆ ಸಿಕ್ಕುತ್ತದೆ.

೬

ರಾಗ—ಸಾವೇರಿ ತಾಳ—ಛಾಪು

೧ ಎಂಥ ಪುಣ್ಯವೆ ನಿನ್ನದೆಂಥ ಭಾಗ್ಯವೆ ಗೋಪಿ ।
ಇಂಥ ಮಗನ ಕಾಣೆವೆ ॥ ಪ ॥

ಚಿಂತಿಸಿದರೂ ದೊರಕ ಚೆಲುವ ರಾಜಗೋಪಾಲ ।
ಇಂತೀ ಮಾತುಗಳೆಲ್ಲವು—ಹುಸಿಯಲ್ಲವು ॥ ಅ. ಪ ॥

ಸರಸಿಜನಾಭನ ಸುಮ್ಮನೆ ಕೊಂಡಾಡೆ ।
ದುರಿತವೆಲ್ಲವು ಪೋಪುದೆ ॥
ಸರಸದಿಂದಲಿ ಒಮ್ಮೆ ಸವಿಮಾತನಾಡಿದರೆ ।
ಪರಿತೋಷ ಕೈಗೂಡುವುದೆ—ಯಶೋದೆ ॥ ೧ ॥

ಊರ ಒಳಗೆ ನಿಮ್ಮ ಅಂಜಿಕೆ ನೆರೆಹೊರೆ ।
ದೂರಿಕೊಂಬುವರಲ್ಲವೆ ? ॥
ಆರಣ್ಯದಲಿ ನಾವು ಆಡಿದ ಆಟವು ।
ಆರಿಗಾದರು ಉಂಟೇನೆ—ಇಂದುವದನೇ ? ॥ ೨ ॥

ನಿನ್ನ ಮಗನ ಕರೆಯೆ ಎನ್ನ ಪ್ರಾಣದೊಡೆಯ ।
ಪುಣ್ಯದ ಫಲವು ಕಾಣೆ ॥
ಚೆನ್ನ ಶ್ರೀಪುರಂದರವಿಟ್ಠಲರಾಯನ ।
ನಿನ್ನಾಣೆ ಬಿಡಲಾರೆವೆ—ಪುಸಿಯಲ್ಲವೆ ॥ ೩ ॥

೧ ಝು (೩) ಮು. ಶ್ರೀ ಪ್ರತಿಗಳಿಂದ ಆರಿಸಿದೆ.

೭

ರಾಗ—ಅರಭಿ ತಾಳ—ಆದಿ

೧ ಲಾಲಿಸಿದಳು ಮಗನ—ಯಶೋದೆ ।
ಲಾಲಿಸಿದಳು ಮಗನ ‖ ಪ ‖

ಅರಳೆಲೆ ಮಾಗಾಯಿ ಬೆರಳಿಗುಂಗುರವಿಟ್ಟು ।
ತರಳನ ಮೈಸಿರಿ ತರುಣಿ ನೋಡುತೆ ಹಿಗ್ಗಿ ‖ ೧ ‖

ಬಾಲಕನೇ ಕೆನೆವಾಲ ಮೊಸರನೀವೆ ।
ಲೀಲೆಯಿಂದಲಿ ಎನ್ನ ತೋಳ ಮೇಲ್ಮಲಗೆಂದು ‖ ೨ ‖

ಮುಗುಳುನಗೆಯಿಂದಲಿ ಮುದ್ದು ತಾತಾರೆಂದು ।
ಜಗದೊಡೆಯನ ಶ್ರೀಪುರಂದರವಿಠಲನ ‖ ೩ ‖

೮

ರಾಗ—ಮುಖಾರಿ ತಾಳ—ಅಟ

೨ ಮಕ್ಕಳ ಮಾಣಿಕ ಮನೋಹರ ನಿಧಿ—ವೈರಿ-।
ರಕ್ಕಸ ಶಕಟನ ತುಳಿದುದೀಪಾದವೆ ‖ ಪ ‖

ಬಲಿಯು ದಾನವ ಬೇಡಿ ನೆಲವ ಈರಡಿ ಮಾಡಿ ।
ಜಲಧಿಯ ಪಡೆದದ್ದು ಈ ಪಾದವೆ ‖
ಹಲವು ಕಾಲಗಳಿಂದ ಶಿಲೆ ಶಾಪವಡೆದಿರಲು ।
ಫಲಕಾಲಕ್ಕೊದಗಿದುದೀ ಪಾದವೆ ‖ ೧ ‖

---

೧ ಕ ಪ್ರತಿಯಿಂದ ತೆಗೆದುಕೊಂಡಿದೆ.
೨ ಮ ಪ್ರತಿಯಿಂದ ಆರಿಸಿಕೊಂಡಿದೆ.

ಕಡುಕೋಪದಿ ಕಾಳಿಂಗನ ಮಡುವ ಕಲಕಿ ।
ಹೆಡೆಯನು ತುಳಿದುದು ಈ ಪಾದವೆ ॥
ಸಡಗರದಿಂದ ಕೌರವನ ಸಿಂಹಾಸನವ ।
ಹೊಡೆಮುಗುಚಿ ಕೆಡಹಿದುದೀ ಪಾದವೆ ॥ ೨ ॥

ಶೃಂಗಾರದಿಂದ ಹೆಂಗಳು ಲಕ್ಷುಮಿಯು ಸಹಿತ ।
ಅಂಗನೆಯರೊತ್ತುವುದೀ ಪಾದವೆ ॥
ಸಂಗಸುಖದಿಂದ ಶ್ರೀಪುರಂದರವಿಠಲನ ।
ಅಂಗದೊಳಡಗಿದ್ದುದೀ ಪಾದವೆ ॥ ೩ ॥

## ೬

ರಾಗ—ಕೇದಾರಗೌಳ ತಾಳ—ಅಟ

೧ ಗೋಕುಲದ ಗೋಪಿಯರದೇನು ಧನ್ಯರೋ ।
ಶ್ರೀಕಾಂತನನುರಾಗದಲಿ ಪಾಡುತಿಹರೊ ॥ ಪ ॥

ಕುಳಿತು ಕರೆವಾಗ ನಿಂತು ಕಳವೆಗಳ ಕುಟ್ಟುವಾಗ ।
ತಳಿಸಾರಣಿ ಸಮ್ಮಾರ್ಜಿಸುವಾಗ ॥
ಅಳುವ ಮಕ್ಕಳ ತೊಟ್ಟಿಲೊಳಿಟ್ಟು ತೂಗುವಾಗ ।
ಬೆಳಗುಜಾವದಿ ಮೊಸರ ಕಡೆವಾಗಲು ॥ ೧ ॥

ನಡೆವಾಗ ನುಡಿವಾಗ ಭೋಜನವ ಮಾಡುವಾಗ ।
ಉಡುವಾಗ ಆಭರಣ ಇಡುವಾಗಲು ॥
ಮುಡಿವಾಗ ಮಲ್ಲಿಗೆ ಉಯ್ಯಾಲೆಯನಾಡುವಾಗ ।
ಅಡಿಗಡಿಗೆ ತಾಂಬೂಲ ಮೆಲುವಾಗಲು ॥ ೨ ॥

---

೧ ಇ ಪ್ರತಿಯಿಂದ ತೆಗೆದುಕೊಂಡಿದೆ.

ಪರಿಪರಿ ರಾಗದಿಂದಲಿ ಪರಿಪರಿ ಮಾತಿನಿಂದ ।
ಪರಿಪರಿ ಗೀತಪ್ರಸಂಗದಿಂದ ॥
ಪರಿಪೂರ್ಣನಾದ ಶ್ರೀಪುರಂದರವಿಠಲನ ।
ಹಿರಿದಾಗಿ ಮನದೊಳಗೆ ಸ್ಮರಿಸುತಿಹರು ॥ ೩ ॥

## ೧೦

### ಸುಳಾದಿ

#### ಧ್ರುವತಾಳ

೧ ಎಲೆ ಎಲೆ ಸಿಡಿಲೆ, ಮಿಂಚೆ, ಗರ್ಜಿಸದಿರಿ ನೀವು ।
ಎಲೆ ಎಲೆ ಮೇಘರಾಜಾ, ಮಳೆಗರೆಯದಿರು ।
ಎಲೆ ಎಲೆ ಭೂದೇವಿ, ನವರತುನಗಳಿಂದ ।
ನೆಲೆ ಕಟ್ಟಿಕಟ್ಟಿಕೊಂಡು ಥಳಥಳಿಸುತಲಿರು ।
ಹುಲಿಯುಗುರು ಅರಳೆಲೆ ಮಾಗಾಯಿ ಕಂಕಣ ।
ಘಲುಘಲುಘಲುಕೆಂಬ ಕಾಲಪೆಂಡೆಯನಿಟ್ಟು ।
ಬಲರಾಮ ಪುರಂದರವಿಠಲ ಗೋಪಾಲಕೃಷ್ಣ ।
ನಲಿಯುತ ಅಂಜಿಗಾಲನಿಕ್ಕುತ ಬರುತಾರೆ ॥ ೧ ॥

#### ಮಟ್ಟತಾಳ

ಮಲ್ಲಿಗೆ ಮೊಗ್ಗೆಗಳಂತೆ ಹಲ್ಲು ಬಂದಿವೆ ಸಿರಿಕೃಷ್ಣಯ್ಯಗೆ ।
ಎಲ್ಲಿ ಎಲ್ಲಿ ಬಾಯ್ ತೆರೆಯೊ ಎನೆ ।
ಎಲ್ಲ ಬೊಮ್ಮಾಂಡವ ಕಂಡೆ ।
ಎಲ್ಲರಂಥ ಕಂದನಲ್ಲಿವ ।
ಬಲ್ಲವರಿಗೆ ಪುರಂದರವಿಠಲನು ।
ಜಗದ ಪಾಲಕನು....ಹಲ್ಲು ಬಂದಿವೆ ॥ ೨ ॥

---

೧ ಅ (ಬಿ೩೪) ಪ್ರತಿಯಿಂದ ಆರಿಸಿದೆ.

ತ್ರಿವಿಡೆತಾಳ

ಬೆಣ್ಣೆಯ ಬಟ್ಟಲವ ತೊಡೆಯಮೇಲಿಟ್ಟುಕೊಂಡು ।
ಅಣ್ಣ ಬಲರಾಮನ ಕೂಡಿಕೊಂಡು ।
ಚೆನ್ನಾಗಿ ಡೊಗ್ಗಾಲೂರಿ ಮೆಲ್ಲುವ ಕೃಷ್ಣ ।
ಕಣ್ಣುಬಿಡುವನೇನೆ ಕೇಳೇ ಗೋಪೀದೇವಿ ।
ಸಣ್ಣವನೇನೆ ಪುರಂದರವಿಠಲ ॥ ೩ ॥

ಆದಿತಾಳ

ಇದೆ ಇದೆ ಕೈಬೆಣ್ಣೆ, ಇದೊ ಅಂಗೈ ಸಿಕ್ಕಿತು ।
ಇದೆ ಇದೆ ಕಟಬಾಯಿ ಇದೇ ಸುರಿಯುವ ಬೆಣ್ಣೆ ।
ಇದೆ ಇದೆ ಗೋಪೀದೇವಿ ನಿನ್ನ ಮಗನು ಕಳ್ಳ ।
ಇದೆ ಇದೆ ಹಿಡಿದು ತಂದೆವು ನೋಡೇ ।
ಹದುಳದಿಂದಿಡೆ ಲೇಸು ಇಲ್ಲದಿದ್ದರೆ ನಿನ್ನ ।
ತದುಕಿಬಿಡುವೆನಯ್ಯ ಪುರಂದರವಿಠಲ ॥ ೪ ॥

ರೂಪಕತಾಳ

ನೀಲಮೇಘಶ್ಯಾಮ ಕೋಮಲನೆ ।
ಹಾಲು ಕುಡಿಯ ಬಾರೊ ಹಸಿದೆಯಾ ರಂಗಯ್ಯ ।
ಹಾಲು ಮೊಸರು ಬೆಣ್ಣೆ ಹಾವಳಿಗಾರನೊ ।
ಶ್ರೀಲೋಲ ಪುರಂದರವಿಠಲ ಗೋಪಾಲಕೃಷ್ಣ ॥ ೫ ॥

ಜತೆ

ಅನುದಿನ ಬಾಲಗೋಪಾಲಕೃಷ್ಣನೆ ನಿನ್ನ ।
ನೆನೆವಂತೆ ಮಾಡೆನ್ನ ಪುರಂದರವಿಠಲ ॥

## ೧೧

### ಉಗಾಭೋಗ

[೧] ಕಾಲ ಮೇಲೆ ಮಲಗಿ ಸಿಂಪಿಯಲಿ ಹಾಲ ಕುಡಿದು ಬೆಳೆದೆ ।
ಮೂರು ಲೋಕ ನಿನ್ನುದರದಲ್ಲಿರಲು ।
ಈರೇಳು ಲೋಕವನೀರಡಿ ಮಾಡಲು ।
ಮೂರು ಲೋಕದೊಡೆಯ ಶ್ರೀಪುರಂದರವಿಠಲ ।
ನಿನ್ನ ಬಾಲಕತನದ ಲೀಲೆಗೆ ನಮೋ ನಮೋ ॥ ೧ ॥

## ೧೨

ರಾಗ—ಧನ್ಯಾಸಿ ತಾಳ—ಆದಿ

[೨] ಮುದ್ದು ತಾರೊ—ಕೃಷ್ಣ—ಎದ್ದು ಬಾರೊ ।
ಶುದ್ಧವಾದ ಕರ್ಪುರದ ಕರಡಿಗೆಯ ಬಾಯಲೊಮ್ಮೆ ॥ ಪ ॥

ಕಡೆಯುವ ಸಮಯಕೆ ಬಂದು ಕಡೆವ ಸತಿಯ ಕೈಯ ಪಿಡಿದು ।
ಬಿಡದೆ ಹೊಸ ಹೊಸ ಬೆಣ್ಣೆಯನು ಒಡನೆ ಮೆಲುವ
ಬಾಯಲೊಮ್ಮೆ ॥ ೧ ॥

ವಿಷವನುಣಿಸಲು ಬಂದ ಅಸುರೆ ಪೂತನಿಯ ಕೊಂದ ।
ವಶವಲ್ಲವೊ ಮಗನೆ ನಿನ್ನ ವಿಷವನುಂಡ ಬಾಯಲೊಮ್ಮೆ ॥ ೨ ॥

ಪುರಂದರವಿಠಲನೆ ತೋರವೆಯು ನಾರಸಿಂಹ ।
ಕರವಿಯ ಹಾಲ ಕುಡಿದು ಸುರಿವ ಜೊಲ್ಲ ಬಾಯಲೊಮ್ಮೆ ॥ ೩ ॥

---

೧ ಝು (೮) ಪ್ರತಿಯಿಂದ ಆರಿಸಿದೆ.
೨ ಅ (೭) ಪ್ರತಿಯಿಂದ ಆರಿಸಿಕೊಂಡಿದೆ.

೧೩

ರಾಗ—ನವರೋಜು ತಾಳ—ಆದಿ

೧ ತೋಳು ತೋಳು ತೋಳು ಕೃಷ್ಣ—ತೋಳನ್ನಾಡೈ ।
ನೀಲಮೇಘಶ್ಯಾಮ ಕೃಷ್ಣ ತೋಳನ್ನಾಡೈ ॥ ಪ ॥

ಗಲಿಕೆಂಬಂದುಗೆ ಉಲಿಯುವ ಗೆಜ್ಜೆಯ ತೋ— ।
ಅಲುಗುವ ಅರಳೆಲೆ ಮಾಗಾಯ್ಮಿನುಗಲು ತೋ— ॥
ನೆಲುವು ನಿಲುಕದೆಂದೊರಳ ತಂದಿಡುವನೆ ತೋ— ।
ಚೆಲುವ ಮಕ್ಕಳ ಮಾಣಿಕ್ಯವೆ ನೀ ತೋ— ॥ ೧ ॥

ದಟ್ಟಡಿಯಿಡುತಲಿ ಬೆಣ್ಣೆಯ ಮೆಲುವನೆ ತೋ— ।
ಕಟ್ಟಿದ ಕರಡೆಯ ಕರುವೆಂದೆಳೆವನೆ ತೋ— ॥
ಬೊಟ್ಟನಲ್ಲಿ ತಾಯ್ಗಣಕಿಸಿ ನಗುವನೆ ತೋ— ।
ಬಟ್ಟಲ ಹಾಲನು ಕುಡಿದು ಕುಣಿವನೇ ತೋ— ॥ ೨ ॥

ಅಂಬೆಗಾಲಿಲೊಂದೊರಳನ್ನೆಳೆವನೆ ತೋ— ।
ತುಂಬಿದ ಬಂಡಿಯ ಮುರಿಯಲೊದ್ದವನೆ ತೋ— ॥
ಕಂಬದಿಂದಲವತರಿಸಿದವನೆ ನೀ ತೋ— ।
ನಂಬಿದವರನು ಹೊರೆವ ಕೃಷ್ಣ ತೋ— ॥ ೩ ॥

ಕಾಲಕೂಟದ ವಿಷವ ಕಲಕಿದ ತೋ— ।
ಕಾಳಿಂಗನ ಹೆಡೆಯನು ತುಳಿದ ತೋ— ॥
ಕಾಳೆಗದಲಿ ದಶಕಂಠನ ಮಡುಹಿದ ತೋ— ।
ಶಾಲಕ ವೈರಿಯೆ ಕರುಣಿಗಳರಸನೆ ತೋ— ॥ ೪ ॥

---

೧ ಕ. ವಿ. ವಿ. ತಾಳೆಗರಿ (೧೬೭೦ ಸಂ. ೨೯೭೨)ಯಲ್ಲಿಯಷ್ಟೆ ಸಿಕ್ಕುತ್ತಿದೆ.

ನಖದಿಂದಲಿ ಹಿರಣ್ಯಕನನು ಸೀಳಿದ ತೋ— ।
ಸುಖವನಿತ್ತು ಪ್ರಹ್ಲಾದನ ಕಾಯ್ದುವ ತೋ— ॥
ವಿಕಳಗೊಳಿಸಿದೆ ಗೋಪಿಯರೆಲ್ಲರ ತೋ— ।
ರುಕುಮಿಣಿಪತಿ ಸಿರಿಪುರಂದರವಿಟ್ಠಲ ತೋ— ॥ ೫ ॥

## ೧೪

ರಾಗ—ಭೈರವಿ ತಾಳ—ಆದಿ

೧ ಕೈಯ ತೋರೋ ಕರುಣೆಗಳರಸಾ—ಕೈಯ ತೋರೊ ।
ಕೈಯಲಿ ಬೆಣ್ಣೆಯ ಮುದ್ದೆಯ ನೀಡುವೆ—ಕೈಯ ॥ ಪ ॥

ಅಂಗುಲಿಯೊಳು ಪೊನ್ನುಂಗುರವೊಪ್ಪುವ ಕೈಯ ತೋರೊ ।
ಶೃಂಗಾರದಿ ಶಂಖಚಕ್ರವ ಧರಿಸಿದ ಕೈಯ ತೋರೊ ॥
ಅಂಗೈಯಲಿ ಧ್ವಜಪದ್ಮವಿರಾಜಿಪ ಕೈಯ ತೋರೊ ।
ಅಂಗನೆಯರ ಉತ್ತುಂಗ ಕುಚದಲಿಟ್ಟ ಕೈಯ ತೋರೊ ॥ ೧ ॥

ಬಡಬ್ರಾಹ್ಮಣನವಲಕ್ಕಿಯ ಬೇಡಿದ ಕೈಯ ತೋರೊ ।
ಕೊಡೆಮಾಡಿ ಗಿರಿಯೆತ್ತಿ ಗೋಗಳ ಕಾಯ್ದ—ಕೈಯ ತೋರೊ ॥
ಕಡುಹಿರಣ್ಯಾಖ್ಯನ ಒಡಲನು ಬಗೆದ—ಕೈಯ ತೋರೊ ।
ದೃಢಪ್ರಹ್ಲಾದನ ಮಂಡೆಯೊಳಿಟ್ಟಾ ಕೈಯ ತೋರೊ ॥ ೨ ॥

ಅಲ್ಲಿ ಪೂತನಿಯ ಅಸುವನೆ ಹೀರಿದ ಕೈಯ ತೋರೊ ।
ಬಲ್ಲಿದ ಮಲ್ಲರ ಮರ್ದಿಸಿ ಬಂದ—ಕೈಯ ತೋರೊ ॥
ಮೆಲ್ಲನೆ ಕುಬುಜೆಯ ಡೊಂಕನೆ ತಿದ್ದಿದ ಕೈಯ ತೋರೊ ।
ಬಿಲ್ಲನು ಎಡಗೈಯಲಿ ಮುರಿದಿಟ್ಟಾ ಕೈಯ ತೋರೊ ॥ ೩ ॥

---

೧ ಅ (೮) ಪ್ರತಿಯಿಂದ ತೆಗೆದುಕೊಂಡಿದೆ. (ಪ್ರಾಚೀನ) ಅ (ಬಿಡಿ ೫) ಪು (೩-೧೦) ಪ್ರತಿಗಳಲ್ಲಿ ಗುರುಪುರಂದರವಿಠಲನೆಂಬ ಮುದ್ರಿಕೆಯಿದೆ.

ಬಲಿಯನು ವಂಚಿಸಿ ದಾನವ ಬೇಡಿದ ಕೈಯ ತೋರೊ ।
ಫಲಪುಷ್ಪ ಪಾರಿಜಾತವ ತಂದ ಕೈಯ ತೋರೊ ॥
ಒಲಿದು ಪಾರ್ಥಗೆ ರಥವನು ನಡಸಿದ ಕೈಯ ತೋರೊ ।
ಮಲ್ಲಿಗೆ ಜಾಜಿಯ ತುರುಬಿಗೆ ಮುಡಿಸಿದ ಕೈಯ ತೋರೊ ॥ ೪ ॥

ಆಕಾಶದ ಚಂದ್ರಮನನು ಕರೆದ—ಕೈಯ ತೋರೊ ।
ನಾಕಪತಿಗೆ ಅಭಯವನಿತ್ತ—ಕೈಯ ತೋರೊ ಅ- ॥
ನೇಕ ಬಗೆಯಲಿ ಕೊಳಲನೂದುವ—ಕೈಯ ತೋರೊ ।
ಶ್ರೀಕಾಂತ ನಮ್ಮ ಪುರಂದರವಿಠಲ—ಕೈಯ ತೋರೊ ॥ ೫ ॥

೧೫

ರಾಗ—ನಾದನಾಮಕ್ರಿಯೆ ತಾಳ—ಆದಿ

೧ ತಾರಮ್ಮಯ್ಯ—ಯದುಕುಲ- ।
ವಾರಿಧಿ ಚಂದ್ರಮನ ॥ ಪ ॥

ಮಾರಜನಕನ—ಮೋಹನಾಂಗನ— ।
ಸೇರಿ ಸುಖಿಸೆ ಹಾರೈಸಿ ಬಂದೆವು ॥ ಅ. ಪ ॥

ಬಿಲ್ಲುಹಬ್ಬಗಳಂತೆ—ಅಲ್ಲಿ—ಬೀದಿಶೃಂಗಾರವಂತೆ ॥
ಮಲ್ಲಕಾಳಿಗ ಮದ್ದಾನೆಗಳಂತೆ ।
ಫುಲ್ಲಾಕ್ಷನು ತಾನಲ್ಲಿಗೆ ತೆರಳಿದ ॥ ೧ ॥

ಮಧುರಾಪುರವಂತೆ—ಅಲ್ಲಿ—ಮಾವ ಕಂಸನಂತೆ ॥
ಒದಗಿದ ಮದಗಜ ತುರಗ ಸಾಲಿನಲಿ ।
ಮದನಮೋಹನ ಕೃಷ್ಣ ಮಧುರೆಗೆ ತೆರಳಿದ ॥ ೨ ॥

---

೧ ತ ಪ್ರತಿಯಿಂದ ತೆಗೆದುಕೊಂಡಿದೆ.

ಅತ್ತೆಮಾವನ ಬಿಟ್ಟು—ಬಂದೆವು ಹಿತ್ತಲ ಬಾಗಿಲಿಂದ ॥
ಭಕ್ತವತ್ಸಲನ ಬಹು ನಂಬಿದ್ದೆವು ।
ಉತ್ಸಾಹಭಂಗವ ಮಾಡಿದನಮ್ಮ ॥ ೩ ॥

ರಂಗನ ನೆರೆನಂಬಿ—ಬಂದೆವು—ಸಂಗಸುಖವ ಬಯಸಿ ॥
ಭಂಗಿಸಿ ನಮ್ಮನು ಹಾಗೆ ಪೋದನಮ್ಮ ।
ಮಂಗಳಮೂರುತಿ ಮದನಗೋಪಾಲನು ॥ ೪ ॥

ಶೇಷಗಿರಿಯ ಮೇಲೆ—ಹರಿತಾ—ವಾಸವಾಗಿಹ ಕಾಣೆ ॥
ಸಾಸಿರನಾಮದ ಒಡೆಯನೆಂದೆನಿಸಿದ ।
ಶ್ರೀಶಪುರಂದರವಿಠಲರಾಯನ ॥ ೫ ॥

೧೬

ರಾಗ—ಪಂತುವರಾಳಿ ತಾಳ—ಅಟ

೧ ಹಣ್ಣು ತಾ ಬೆಣ್ಣೆ ತಾರೆ-ಗೋಪಮ್ಮ— ।
ಹಣ್ಣು ತಾ ಬೆಣ್ಣೆ ತಾರೆ ॥ ಪ ॥

ಅಡವಿಯೊಳಗೆ ಅಸುರನ ಕೊಂದ ಕೈಗೆ ।
ಮಡುವಿನೊಳಗೆ ಮಕರನ ಸೀಳ್ದ ಕೈಕೆ ॥
ಪೊಡವಿಯೊಳಗೆ ಚೆಂಡನಾಡಿದ ಕೈಗೆ ।
ಸಡಗರದಲಿ ಭೂಮಿ ಬೇಡಿದ ಕೈಗೆ । ॥ ೧ ॥

ಶಂಖ-ಚಕ್ರಗಳ ಪಿಡಿದಂಥ ಕೈಗೆ ।
ಶಂಕೆಯಿಲ್ಲದೆ ಮಾವನ ಕೊಂದ ಕೈಗೆ ॥
ಬಿಂಕದಿಂದಲಿ ಕೊಳಲೂದುವ ಕೈಗೆ ।
ಪಂಕಜಮುಖಿಯರ ಕುಣಿಸುವ ಕೈಗೆ ॥ ೨ ॥

೧ ೬ ಪ್ರತಿಯಲ್ಲಿ ಈ ಹಾಡು ಸಿಕ್ಕಿದೆ.

ದಿಟ್ಟತನದಲಿ ಬೆಟ್ಟವೆತ್ತಿದ ಕೈಗೆ ।
ಸೃಷ್ಟಿಯ ದಾನವ ಬೇಡಿದ ಕೈಗೆ ॥
ದುಷ್ಟಭೂಪರನೆಲ್ಲ ಮಡುಹಿದ ಕೈಗೆ ।
ಕೆಟ್ಟ ದಾನವರನು ಸದೆದಂಥ ಕೈಗೆ ॥ ೩ ॥

ಕಾಳಿಯ ಮಡುವನು ಕಲಕಿದ ಕೈಗೆ ।
ಸೋಳಸಾಸಿರ ಗೋಪಿಯರಾಳಿದ ಕೈಗೆ ॥
ಮೇಳದ ಭಕ್ತರುದ್ಧರಿಸುವ ಕೈಗೆ ।
ಏಳು ಗೂಳಿಯ ಗೆದ್ದ ಯದುಪನ ಕೈಗೆ ॥ ೪ ॥

ಬಿಲ್ಲು-ಬಾಣಗಳನು ಪಿಡಿದಂಥ ಕೈಗೆ ।
ಮಲ್ಲಸಾಧನೆಯನು ಮಾಡಿದ ಕೈಗೆ ॥
ಎಲ್ಲ ದೇವರದೇವ ರಂಗನ ಕೈಗೆ ।
ಬಲ್ಲಿದ ಪುರಂದರವಿಠಲನ ಕೈಗೆ ॥ ೫ ॥

## ೧೭

ರಾಗ—ಕಾಂಬೋಧಿ ತಾಳ—ಆದಿ

೧ ಅಂಗನೆಯರೆಲ್ಲ ನೆರೆದು ಚಪ್ಪಳೆಯಿಕ್ಕುತ ದಿವ್ಯ ।
ಮಂಗಳನಾಮವ ಪಾಡಿ ರಂಗನ ಕುಣಿಸುವರು ॥ ಪ ॥

ಪಾಡಿ ಮಲಹರಿ ಭೈರವಿ ಸಾರಂಗ ದೇಶಿ ।
ಗುಂಡಕ್ರಿ ಗುಜ್ಜರಿ ಕಲ್ಯಾಣಿ ರಾಗದಿ ॥
ತಂಡತಂಡದಿ ನೆರೆದು ರಂಗನ ಉಡಿಗಂಟೆ ।
ಧಂ ಧಣ ಧಣಿರೆಂದು ಪಿಡಿದು ಕುಣಿಸುವರು ॥ ೧ ॥

೧ ಓ ಪ್ರತಿಯಿಂದ ತೆಗೆದುಕೊಂಡಿದೆ.

ತುತ್ತೂರಿ ಮೌರಿ ತಾಳ ದಂಡಿಗೆ ಮದ್ದಲೆ ।
ಉತ್ತಮ ಶಂಖದ ನಾದಗಳಿಂದ ॥
ಸುತ್ತಮುತ್ತಿ ನಾರಿಯರು ತಾಥೈಯೆಂದು ।
ಅರ್ತಿಯಿಂದ ಕುಣಿಸುವರು ಪರವಸ್ತು ತತ್ಥೈ ಹಿಡಿದು ॥ ೨ ॥

ಕಾಮಿನಿಯರೆಲ್ಲ ನೆರೆದು ಕಂದನೊಡನಾಟವಾಡಿ ।
ಪ್ರೇಮದಿಂದ ಬಿಗಿಬಿಗಿದಪ್ಪಿ ಮುದ್ದಾಡಿ ॥
ಕಾಮಿತ ಫಲವೀವ ಭಕುತಜನರೊಡೆಯ ।
ಸ್ವಾಮಿ ಶ್ರೀಪುರಂದರವಿಠಲರಾಯನ ॥ ೩ ॥

## ೧೮

ರಾಗ—ಸಾರಂಗ ತಾಳ—ಆದಿ

೧ ಹರಿಯೆ, ಕುಣಿಯೆನುತ—ನರ-
ಹರಿಯೆ, ಕುಣಿಯೆಂದು ಕುಣಿಸಿದರಯ್ಯ ॥ ಪ ॥

ಲೋಕವ ತಾಳ್ದನ ಮನೆಯಲಿ ಪುಟ್ಟಿ ।
ತೂಕದ ನುಡಿಗಳ ಕದ್ದವನ ॥
ನಾಕರಿಸಲು ನಿಜ ಗೋಪರೂಪದಿಂದ ।
ಆಕರಿಸಿದನಾ ಕುಣಿಸಿದರಯ್ಯ ॥ ೧ ॥

ಎಡೆಯಿಲ್ಲದೆ ನಡೆವನ ಕೂಡಿರುವನ ।
ಹಿಡಿತಿಂಬನ ಒಡಹುಟ್ಟಿದನ ॥
ಒಡೆಯನ ಕಂದನ ವೈರಿಯ ಬಂಡಿಯ ।
ಹೊಡೆದ ಮಹಾತ್ಮನ ಕುಣಿಸಿದರಯ್ಯ ॥ ೧ ॥

೧ N ಪ್ರತಿಯಿಂದ ತೆಗೆದುಕೊಂಡಿದೆ.

ಒಣಗಿದ ಮರ ಎಲೆಯಿಲ್ಲದ ಬಳ್ಳಿ ।
ಬಣತಿಗೆ ಪುಟ್ಟಿದ ವನದಲ್ಲಿ ॥
ಕ್ಷಣ ಮುನ್ನರಿಯದೆ ಅದರ ಆಹಾರಕೆ ।
ಫಣಿಯ ಮೆಟ್ಟಿದನ ಕುಣಿಸಿದರಯ್ಯ ॥ ೩ ॥

ಮಾವನೊಡನೆ ಮನೆಮಾಡಿ ಗೋಕರ್ಣದಿ ।
ಆವುರಗನ ಮೇಲ್ಮಲಗಿದನ ॥
ಮೂವರ ಮೊಲೆಯುಂಡ ಮೂಲೋಕವರಿಯದ ।
ಮೂವರಣ್ಣನೆಂದು ಕುಣಿಸಿದರಯ್ಯ ॥ ೪ ॥

ಗೋಕುಲದೊಳಗಿನ ಗೋಪಿಯರೆಲ್ಲ ।
ಏಕಾಂತದಿ ತಮ್ಮೊಳು ತಾವು ॥
ಶ್ರೀಕಾಂತನ ನಮ್ಮ ಪುರಂದರವಿಠಲನ ।
ಏಕ ಮೂರುತಿಯೆಂದು ಕುಣಿಸಿದರಯ್ಯ ॥ ೫ ॥

## ೧೯

ರಾಗ—ಪಿಲು ತಾಳ— ·

೧ ಹರಿ ಕುಣಿದ–ನಮ್ಮ–ಹರಿ ಕುಣಿದ ॥ ಪ ॥

ಅಕಲಂಕಚರಿತ—ಮಕರಕುಂಡಲಧರ ।
ಸಕಲರ ಪಾಲಿಪ ಹರಿ ಕುಣಿದ ॥ ೧ ॥

---

೧ ಝು (೧೦) ಪ್ರತಿಯಲ್ಲಿಯೇ ಸಿಕ್ಕಿದೆ.
ಎ–ಓ ಪ್ರತಿಗಳಲ್ಲಿ ಕೆಳಗಿನ ಎರಡು ನುಡಿಗಳು ಹೆಚ್ಚಿಗಿವೆ.

ಅಂದುಗೆ-ಪಾಡಗ ಬಿಂದುಲಿ-ಬಾಪುರಿ ।
ಚೆಂದದಿ ನಲಿಯುತ ಹರಿ ಕುಣಿದ ॥ ೧ ॥

ಉಟ್ಟ ಪಟ್ಟೆಯ ದಟ್ಟಿ ಇಟ್ಟ ಕಾಂಚಿಯ ದಾಮ
ದಿಟ್ಟ ಮಲ್ಲರ ಗಂಡ ಹರಿ ಕುಣಿದ ॥ ೨ ॥

ಅರಳೆಲೆಮಾಗಾಯಿ ಕೊರಳ ಮುತ್ತಿನಸರ ।
ತರಳರ ಕೂಡಿ ತಾ ಹರಿ ಕುಣಿದ ॥ ೨ ॥

ಪರಮಭಾಗವತ ಪುರದೊಳಗಾಡುವ ।
ಪುರಂದರವಿಟ್ಠಲ ಹರಿ ಕುಣಿದ ॥ ೩ ॥

## ೨೦

ರಾಗ—ಸಾರಂಗ ತಾಳ—ರೂಪಕ

೧ ಚೆಂದವ ನೋಡಿರೆ—ಗೋಕುಲಾ- ।
ನಂದನ ಮೂರುತಿಯ ॥ ಪ ॥

ಅಂದುಗೆ ಪಾಡಗ ಗೆಜ್ಜೆಯ ಧರಿಸಿ ।
ಧಿಂ ಧಿಂ ಧಿಮಿಕೆಂದು ಕುಣಿವ ಕೃಷ್ಣನ ॥ ಅ. ಪ ॥

ಕೊರಳ ಪದಕಹಾರ ಬಿಗಿದು ।
ತರಳರೆಲ್ಲರ ಕೂಡಿಕೊಂಡು ॥
ಕುರುಳುಗೂದಲ ಅರಳೆಲೆಯು ।
ಮಿರು-ಮಿರುಗುತ ಮೆರೆವ ಕೃಷ್ಣನ ॥ ೧ ॥

ಉಡೆಯ ಗಂಟೆ ಘಣಘಣೆನುತ ।
ನುಡಿಯೆ ಮೆಲ್ಲನೆ ಪಿಡಿದುಕೊಂಡು ॥
ನಡೆದಾಡುತ ಸಡಗರದಲಿ ।
ಜೆಡಗ ಮಾಡಿ ಆಡುವ ರಂಗನ ॥ ೨ ॥

ಬಲುಬಲು ಆಶ್ಚರ್ಯದಿಂದ ।
ನಲಿವ ಪುರಂದರವಿಠಲರಾಯ ॥
ಹಲವು ಸುಖವ ನಮಗೆ ಇತ್ತ ।
ಜಲಜಲೋಚನ ಬಾಲಕೃಷ್ಣನ ॥ ೩ ॥

---

೧ ಊ (ಚ) ಪ್ರತಿಯಿಂದ ತೆಗೆದುಕೊಂಡಿದೆ.

## ೨೧

### ಸುಳಾದಿ

#### ಧ್ರುವತಾಳ

೧ ಹೊಡೆಮರಳ ಕಲಿತ ಶ್ರೀಕೃಷ್ಣ ನಾಗರ ।
ಹೆಡೆಯಂತೆ ತಲೆಯೆತ್ತಲು ಕಲಿತ ಕೃಷ್ಣ ।
ಕಡುಮುದ್ದು ಸುರಿವಂತೆ ನಗಲು ಕಲಿತ ಕೃಷ್ಣ ।
ನುಡಿಯ ಕಲಿತ ಉಗ್ಗು ಉಗ್ಗು ಎಂದು ಕೃಷ್ಣ ।
ಉಡಿಗಂಟೆ ಹುಲಿಯುಗುರರಳೆಲೆ ಮಾಗಾಯಿ ।
ಕಡಗ-ಕಂಕಣದಿಂದ ಮುದ್ದುಮೆರೆವ ಕೃಷ್ಣ ।
ಮಡದಿಯರೆತ್ತಿ ಮುದ್ದಾಡಿಸಲವರ ಓ- ।
ರುಡೆಯ ಮೇಲೆದ್ದು ಕುಣಿವನು ಕೃಷ್ಣ ।
ಹಿಡಿಹೊನ್ನು ಗುಬ್ಬಿ ತಾ ಹೊನ್ನಗುಬ್ಬಿಯನಾಡಿ ।
ಜಡಿದು ಚಪ್ಪಾಳೆಯಿಕ್ಕುವನು ಕೃಷ್ಣ ।
ಮೃಡಮುಖ್ಯ ಸುರರು ಅಂಬರದಲಿ ನೋಡಿ ನೋಡಿ ।
ಕಡುಮೊಪ್ಪಿ ತುತಿಸಿ ಹಾರೈಸುತಿರೆ ।
ಕಡೆಗಣ್ಣಿನಿಂದವರ ನೋಡಿ ನಲಿವ ನಮ್ಮ ।
ಒಡನಾಡಿ ಪುರಂದರವಿಠಲ ಗೋಪಾಲಕೃಷ್ಣ ॥ ೧ ॥

#### ಮಟ್ಟಿತಾಳ

ಗಂಡಸ್ಥಳದಲ್ಲಿ ಮಣಿಯ ಕೆಚ್ಚಿದ ಮಕರ- ।
ಕುಂಡಲಗಳು ತೂಗಿ ಪ್ರತಿಬಿಂಬಿಸುತಿರಲು ।
ಪುಂಡರೀಕಾಕ್ಷನ ಉತ್ತಮಾಂಗದಲಿ ರವಿ- ।
ಮಂಡಲಗಳ ಪ್ರಭೆಯ ಮುಸಳಿಸುತಿರೆ ಮುಕುಟ ।
ಹಿಂಡು ಗೋಪಿಯರೊಡನೆ ಆಟವನಾಡುವ ಉ- ।
ದ್ದಂಡ ಬಾಲಕ ಪುರಂದರವಿಠಲ ಗೋಪಾಲಕೃಷ್ಣ ॥ ೨ ॥

---

೧ ಜ ೨ ಇ ( ಮುದ್ರಿತ ) ಪ್ರತಿಗಳಿಂದ ಆರಿಸಿಕೊಂಡಿದೆ.

ರೂಪಕ

ಕನ್ನಡಿಯಂತೆ ಕೋರೈಸುತಿಹ ।
ರನ್ನದಾಕರದ ರಾಜಾಂಗಣದಲ್ಲಿ ।
ಘನ್ನಮಹಿಮ ಅಂಬೆಗಾಲಿಕ್ಕುತ ಬರುತ ।
ತನ್ನ ರೂಹನು ಕಂಡು ಸನ್ನೆ ಮಾಡುವ ನಗುವ ।
ಚೆನ್ನವಾಡಲು ನಗುತ ಜೋಯೆಂದಮ್ಮ ।
ಚಿನ್ನಾಟವಾಡುವ ಹೋಯೆಂದು ಪಾಡುವ ।
ಎನ್ನ ಮುದ್ದು ಪುರಂದರವಿಠರಾಯ ।
ಚೆನ್ನಿಗ ಚೆಲುವ ಗೋಪಾಲಕೃಷ್ಣ ॥ ೩ ॥

ಝುಂಪೆ

ಅಂಬೆಗಾಲಿಕ್ಕುತಲಿ ಬಂದ ಗೋವಿಂದ ।
ತುಂಬಿಗುರುಳಶಳಿಲೆಯ ಸೊಸಲಲೊಲೆಯುತ ।
ರಂಭೆ ಗೋಪಿಯಿದ್ದೆಡೆಗೆ ಬಂದು ।
ಉಂಬೆನಾನಮ್ಮೆಯನು ಎನುತಚ್ಯುತ ।
ತುಂಬಿದೊಳಗಣ ಜಗಂಗಳ ಹೊಟ್ಟೆಯ ।
ತುಂಬುವನ ತಾತ ನಗುತ ನಲಿಯುತ ।
ನಂಬಿದವರ ಪೊರೆವ ಭಕುತರ ಕು- ।
ಟುಂಬಿ ಪುರಂದರವಿಠಲ ಗೋಪಾಲಕೃಷ್ಣ ॥ ೪ ॥

ತ್ರಿವಿಡೆತಾಳ

ಬಲಗೈಯಿಂದಲಿ ತೆಗೆದು ಎಡಗೈ ಬೆಣ್ಣೆಮುದ್ದೆಯ ।
ಮೆಲುವ ಕೃಷ್ಣ ಗೆಳೆಯ ಗೋಪಾಲರಿಗೆಲ್ಲ ।
ಮೆಲಿಸುತ್ತ ಬಲಭದ್ರ ರಾಮಗೆ ಸಹಿರಾಸದೊಳಿರುತ ।
ಇಳೆಯುಯ್ಯನಯ್ಯ ಬಾಲಕನಾದ ಪುರಂದರವಿಠಲ
ಗೋಪಾಲಕೃಷ್ಣ ॥ ೬ ॥

ಅಟತಾಳ

ವಟಪತ್ರದೊಳಡಗಿದ್ದು ಪ್ರಳಯದಲ್ಲಿ ।
ಪುಟಪುಟ್ಟ ಕೈಯಲಿ ಪುಟಪುಟ್ಟ ಪಾದದುಂ- ।
ಗುಟವ ಪಿಡಿದು ಪೀರುವ ಶಿಶುವೀತನು ।
ಪುಟಪುಟ್ಟ ಸೃಷ್ಟೀಶ ಪುರಂದರವಿಠಲ ಗೋಪಾಲಕೃಷ್ಣ ॥ ೬ ॥

ಏಕತಾಳ

ಮಂದರಗಿರಿಯ ಕಡೆದ ತೋಳೊ—ಕೃಷ್ಣ ।
ಸಿಂಧುವನಂಬಿನ ಮನೆಗೆ ತಂದ ತೋಳೊ—ಕೃಷ್ಣ ।
ಬಂದಿಬಾಹು ಬಳೆಯನಿಟ್ಟ ತೋಳೊ—ಕೃಷ್ಣ ।
ಇಂದ್ರಾದಿಗಳಾಶ್ರಯಿಸುವ ತೊಳೊ—ಕೃಷ್ಣ ।
ಚಂದನ ಕುಂಕುಮ ಕಸ್ತೂರಿ ಇಟ್ಟ ತೋಳೊ—ಕೃಷ್ಣ ।
ಇಂದಿರಾದೇವಿಯನಪ್ಪುವ ತೋಳು ತೋಳು ತೋಳು ।
ಕಂದ ಹರಿ ತೋಳನ್ನಾಡೈ ಇಂ- ।
ತೆಂದು ಗೋಪೀದೇವಿ ತೋಳನ್ನಾಡಿಸೆ ಪು- ।
ರಂದರವಿಠಲ ಗೋಪಾಲಕೃಷ್ಣ ಆಡಿದ ॥ ೭ ॥

ಜತೆ

ಬಾಲಕ ಲೀಲಾಲೋಲ ಗೋಪಾಲನು ।
ಮೂಲ ಪುರಂದರವಿಠಲ ಗೋಪಾಲಕೃಷ್ಣ ॥

೨೨

ರಾಗ—ಶಂಕರಾಭರಣ ತಾಳ—ಏಕ

೧ ನೋಡೆ ಗೋಪೀ ಗೋಕುಲದೊಳು ಹರಿ ।
ಮಾಡುವ ಲೀಲೆಗಳಪ್ರತಿಯಮ್ಮ ॥ ಪ ॥

---

೧ ಇ ಪ್ರತಿಯಿಂದ ತೆಗೆದುಕೊಂಡಿದೆ.

ರಂಗನನೆತ್ತಿ ಸಂಭ್ರಮದಿಂದಲಿ ।
ಅಂಗಣದೊಳಗೆ ನಿಂದಾಡಿಸಲು ॥
ತಿಂಗಳ ಬಿಂಬವ ಕಂಡಾಕ್ಷಣ ತ- ।
ನ್ನಂಗೈಯೊಳಗೇ ನಿಲಿಸಿಕೊಡೆಂಬ ॥ ೧ ॥

ಚಿನ್ನನು ನೋಡಲಿ ಎಂದಕ್ಕರದಲಿ ।
ಕನ್ನಡಿಯನು ತಂದು ಕೈಯಲಿ ಕೊಡಲು ॥
ತನ್ನ ಮುಖದ ಪ್ರತಿಬಿಂಬವ ಕಂಡು ಅ- ।
ದನ್ನು ಕರೆದು ಬಳಿಯಿರಿಸಿರಿಯೆಂಬ ॥ ೨ ॥

ಅರಿಯದೆ ದೀಪವ ಕೆಂಪಗೆ ಕಂಡು ।
ಸೆರಗಿನಲ್ಲಿ ಕೊಡು ಆಡುವೆನೆಂಬ ॥
ಕರುವಿನಂತೆ ತನ್ನನು ಕೊಂಡೊಯ್ದು ।
ತುರುಗಳ ಮೊಲೆಯನು ಉಣಿಸಿರಿಯೆಂಬ ॥ ೩ ॥

ಪರಿಪರಿಯಿಂದಲಿ ಗೋಡೆಯ ಮೇಲೆ ।
ಬರೆದಿಹ ಚಿತ್ರದ ಗೊಂಬೆಯ ನೋಡಿ ॥
ಕರವ ಪಿಡಿದು ಎಳೆತಂದು ತನ್ನಯ ।
ನೆರೆಯಲ್ಲಿಯೆ ನೀವಿರಿಸಿರಿಯೆಂಬ ॥ ೪ ॥

ತರುಣಿ ನಿನ್ನಯ ಸುಕೃತದ ಫಲವು ।
ಹರುಷವೆಮಗೆ ಅಭಿವೃದ್ಧಿಯಾಗಿಹುದು ॥
ಪುರಂದರವಿಠಲನ ಚರಿಯವ ನೋಡಲು ।
ಧರೆಯೊಳಗಿನ ಬಾಲಕರಂತಲ್ಲವೆ ॥ ೫ ॥

೨೩

ರಾಗ—ಪಂತುರಾವಳಿ ತಾಳ—ಅಟ

೧ ಕೂಸು ಕಂಡೆವಮ್ಮ—ಅಮ್ಮ ನಿಮ್ಮ—
ಕೂಸು ಕಂಡೆವಮ್ಮ ‖ ಪ ‖

ಕಾಸಿಗೆ ವೀಸದ ಬಡ್ಡಿ ಗಳಿಸಿಕೊಂಡು ।
ಶೇಷಗಿರಿಯ ಮೇಲೆ ವಾಸವಾಗಿಪ್ಪನೆ ‖ ೧ ‖

ವಂಚಿಸಿ ಬಲಿಯೊಳ್ ಪ್ರಪಂಚವೆಲ್ಲ ಸೆಳೆದು ।
ಕಂಚಿ ಪಟ್ಟಣದಿ ಮಿಂಚಾಗಿಪ್ಪನೆ ‖ ೨ ‖

ಗುಡ್ಡ ಬೆರಳಲ್ಲೆತ್ತಿ ದೊಡ್ಡ ಗೋಗಳ ಕಾಯ್ದು ।
ಒಡ್ಡಿ ಜಗನ್ನಾಥ ಗಿಡ್ಡಾಗಿಪ್ಪನೆ ‖ ೩ ‖

ದುಡುಕು ಮಾಡಿ ಹಾಲು ಮಡಕೆಗಳನ್ನೊಡೆದು ।
ಹಡಗನೇರಿ ಬಂದು ಉಡುಪಿಯಲಿಪ್ಪನೆ ‖ ೪ ‖

ಮಂಗಳರೇಖೆ ಪದಂಗಳುಳ್ಳ ನಿಮ್ಮ ।
ರಂಗ ಪುರಂದರವಿಠಲ ಶ್ರೀಕೃಷ್ಣ ‖ ೫ ‖

# ೨. ಶೈಶವಲೀಲೆ

೨೪

ರಾಗ—ಸೌರಾಷ್ಟ್ರ ತಾಳ—ಅಟ

೨ ಬಾರೇ ಗೋಪಮ್ಮ ನಿನ್ನ ಬಾಲಯ್ಯನಳುತಾನೆ ।
ಬಾರೇ ಗೋಪಮ್ಮ—ನಾವ್ ‖

---

೧ ಓ ಪ್ರತಿಯಲ್ಲಿ ಸಿಕ್ಕಿದೆ.

೨ ಅ (ಲ) ಮು. ಶ್ರೀ ಪ್ರತಿಗಳಿಂದ ಆರಿಸಿಕೊಂಡಿದೆ.

ಆರೂ ತೂಗಿದರೂ ಮಲಗನು ಮುರವೈರಿ ।
ಬಾರೇ ಗೋಪಮ್ಮ ॥ ಪ ॥

ನೀರೊಳಗಾಡಿ ಪೈಯೊರಸೆಂದು ಅಳುತಾನೆ—ಬಾರೆ— ।
ಮೇರುವ ಹೊತ್ತು ಮೈಭಾರವೆಂದಳುತಾನೆ—ಬಾರೆ— ॥
ಧರೆಯ ನೆಗಹಿ ತನ್ನದಾಡೆನೊಂದಳುತಾನೆ—ಬಾರೆ— ।
ದುರುಳ ರಕ್ಕಸನ ಕರುಳ ಕಂಡಳುತಾನೆ—ಬಾರೆ— । ॥ ೧ ॥

ನೆಲವನಳೆದು ಪುಟ್ಟ ಚರಣನೊಂದಳುತಾನೆ—ಬಾರೆ— ।
ಛಲದಿಂದ ಕೊಡಲಿಯ ಪಿಡಿವೆನೆಂದಳುತಾನೆ—ಬಾರೆ ॥
ಬಲುಕಪಿಗಳ ಕಂಡಂಜಿಕೊಂಡಳುತಾನೆ—ಬಾರೆ— ।
ನೆಲುವಿನ ಬೆಣ್ಣೆ ಕೈನಿಲುಕದೆಂದಳುತಾನೆ—ಬಾರೆ ॥ ೨ ॥

ಬಟ್ಟ ಬತ್ತಲೆ ನಿಂತು ಎತ್ತಿಕೊಯೆಂದಳುತಾನೆ—ಬಾರೆ— ।
ಶ್ರೇಷ್ಠ ತೇಜಿಯನ್ನು ಹತ್ತಿಸೆಂದಳುತಾನೆ—ಬಾರೆ— ॥
ತೊಟ್ಟಿಲೊಳಗೆ ಮಲಗಲೊಲ್ಲನು ಮುರವೈರಿ—ಬಾರೆ— ॥
ಸೃಷ್ಟಿಯೊಳು ಪುರಂದರವಿಠಲ ಕರೆಯುತಾನೆ—ಬಾರೆ ॥ ೩ ॥

೨೫

ರಾಗ—ಭೈರವಿ ತಾಳ—ಆದಿ

೧ ಕೇಳಲೊಲ್ಲನೆ ಎನ್ನ ಮಾತನು—ರಂಗ— ।
ಕಾಳಿಮರ್ದನನಿಗೆ ಪೇಳೇ ಗೋಪಮ್ಮ ಬುದ್ಧಿ ॥ ಪ ॥

ಬಿಟ್ಟ ಕಂಗಳ ಮುಚ್ಚಲೊಲ್ಲನೆ—ಬೇಗ— ।
ಬೆಟ್ಟಕೆ ಬೆನ್ನೊಡ್ಡಿ ನಿಂತನೆ ॥
ಸಿಟ್ಟಿಂದೆ ಕೋರೆಯ ತೋರ್ಪನೆ—ಬೇಗ— ।
ಗಟ್ಟಿ ಉಕ್ಕಿನ ಕಂಬ ಒಡೆದು ಬಂದನೆ ರಂಗ ॥ ೧ ॥

೧ ಛು (೪, ೧೦) ನು ಪ್ರತಿಗಳಿಂದ ಆರಿಸಿದೆ.

ಮೂರಡಿ ಭೂಮಿಯ ಬೇಡಿದನೆ—ನೃಪರ- ।
ಬೇರ ಕಡಿಯಲು ಕೊಡಲಿ ತಂದನೆ ॥
ನಾರ ಸೀರೆಯನುಟ್ಟುಕೊಂಡನೆ—ಬೇಗ- ।
ಚೋರತನದಿ ಹರವಿ ಹಾಲ ಕುಡಿದನಮ್ಮ ॥ ೨ ॥

ಬತ್ತಲೆ ನಾರಿಯರನಪ್ಪಿದ—ಬೇಗ-
ಉತ್ತಮ ಅಶ್ವವ ಹತ್ತಿದ ॥
ಹತ್ತವತಾರವನೆತ್ತಿದ—ನಮ್ಮ- ।
ಸತ್ಯಮೂರುತಿ ಪುರಂದರವಿಠಲರಾಯನು ॥ ೩ ॥

೨೩

ರಾಗ—ಮೋಹನ ತಾಳ—ಅಟ

೧ ಎತ್ತಿಕೊಳ್ಳೆ ಗೋಪೀ ರಂಗನ ।
ರಚ್ಚೆ ಮಾಧವರಾಯ ನಿಲುವನಲ್ಲ ॥ ಪ ॥

ಕರ್ಣದ ಮಾಗಾಯಿ ಕದಪಲಿ ಹೊಳೆಯುತ ।
ಎಣ್ಣೆಮಣಿಯು ಕೊರಳಲಿ ಹುಲಿಯುಗುರು ॥
ಚಿನ್ನದ ಬಾಯೊಳು ಅಮೃತವ ಸುರಿಯುತ್ತ ।
ಬೆಣ್ಣೆ-ಹಾಲನುಂಬುವೆನೆಂದು ಬಂದ ॥ ೧ ॥

ಅಂಬೆಗಾಲಿಕ್ಕುತ ತುಂಬಿಯೊಲ್ ಮೊರೆಯುತ.... ।
[ ಚೆಂದದ ] ಅರಳೆಲೆ ನಲಿದಾಡುತ ॥
ಬಂದು ಸರಳನಂದದಿ ಬಾಯ ಬಿಡುತ ಮು- ।
ಕುಂದನು ಮೊಲೆಯನುಂಬುವೆನೆಂದು ಬಂದ ॥ ೨ ॥

---

೧ ಆ (ಅ) ಪ್ರತಿಯೊಂದರಲ್ಲಿಯೇ ಸಿಕ್ಕಿದೆ.

ವಿ. ಸು.— ಎರಡನೆಯ ನುಡಿಯ ಪ್ರಾಸ ತಪ್ಪಿದೆ.

ಬಿಗಿದ ಪಟ್ಟೆಯಲಿ ಬಾಯ್ ತಲೆಯು ಹೊಳೆಯುತಿರೆ ।
ಚಿಗುಟುತ ಎಡದ ಕೈಯಲಿ ಕುಚವ ॥
ನಗುತ ನಾಚುತ ಗೋಪಿಯ ಮುಖ ನೋಡುತ ।
ಮಿಗೆ ನಲಿನಲಿದುಂಡ ಪುರಂದರವಿಠಲ ॥ ೩ ॥

## ೨೭

**ರಾಗ—ಶಂಕರಾಭರಣ** **ತಾಳ—ಅಟ**

೧ ಏನಾಯಿತು ರಂಗಗೆ ನೋಡಿರಮ್ಮ—ನಿ- ।
ಧಾನಿಸಿ ಎನಗೊಂದು ಪೇಳಿರಮ್ಮ ॥ ಪ ॥

ಪುಟ್ಟಿದಾರಭ್ಯ ಕಣ್ಣ ಮುಚ್ಚನಮ್ಮ—ತಾನು ।
ಎಷ್ಟಾದರೂ ಮೊಲೆಯುಣ್ಣನಮ್ಮ ॥
ಸೊಟ್ಟಾದ ಮುಖ ಮೇಲಕ್ಕೆತ್ತನಮ್ಮ—ಹೀಗೆ ।
ಎಷ್ಟು ಹೇಳಲಿ ಬಾಯ ಮುಚ್ಚನಮ್ಮ ॥ ೧ ॥

ಕಾಯ ಇದ್ದಂತಿದ್ದು ಹೆಚ್ಚಿತಮ್ಮ—ಹೆತ್ತ ।
ತಾಯಿಯ ಬಲವಿಲ್ಲದಾಯಿತಮ್ಮ ॥
ನೋಯೆ ನೋಟಕೆ ಅಬ್ಧಿ ಬತ್ತಿತಮ್ಮ—ಅವನ ।
ಬಾಯಿಯೊಳಗೆ ವಿಶ್ವ ತೋರಿತಮ್ಮ ॥ ೨ ॥

ಅತ್ಯಂತ ಮಾತುಗಳನಾಡಿದನಮ್ಮ—ಮುಂದೆ ।
ಸತ್ಯವು ಕುದುರೆಯನೇರುವನಮ್ಮ ॥
ನಿತ್ಯ ನಿರ್ದೋಷ ಪುರಂದರವಿಠಲ ತನ್ನ— ।
ಭಕ್ತರ ಸಲಹುವ ದೇವನಮ್ಮ ॥ ೩ ॥

---

೧ ಓ ಪ್ರತಿಯೊಂದರಲ್ಲಿಯೂ ಸಿಕ್ಕಿದೆ.

೨೮

ರಾಗ—ಬಿಲಹರಿ ತಾಳ—ಅಟ

೧ ಏಳಿ ಮೊಸರ ಕಡೆಯಿರೇಳಿ—ಗೋ- ।
ಪಾಲ ಚೂಡಾಮಣಿ ಏಳದ ಮುನ್ನ ॥ ಪ ॥

ಇಂದುಮುಖಿಯರೆದ್ದು ಮುಖವನೆ ತೊಳೆದು ಶ್ರೀ- ।
ಗಂಧ–ಕಸ್ತುರಿ–ಕುಂಕುಮಗಳಿಟ್ಟು ॥
ಚಂದ್ರಗಾವಿಯ ಸೀರೆಯ ನೀರಿವಿಟ್ಟು ಮು- ।
ಕುಂದನ ಪಾಡುತ ಚದುರೆಯರೆಲ್ಲ ॥ ೧ ॥

ಹೊಂಗೊಡ ಬೆಳಗಿಟ್ಟು ಪೊಸಮೊಸರನೆ ತುಂಬಿ ।
ರಂಗನೀಲದ ಕಡೆಗೋಲನಿಟ್ಟು ॥
ಶೃಂಗಾರವಾದ ರೇಶಿಮೆಯ ನೇಣನೆ ಹಿಡಿದು ।
ರಂಗನ ಪಾಡುತ ಚದುರೆಯರೆಲ್ಲ ॥ ೨ ॥

ಬಡನಡು ಬಳುಕುತ ಕುಚಗಳಲ್ಲಾಡುತ ।
ಕಡಗ-ಕಂಕಣ ಝುಣಝುಣರೆನ್ನುತ ॥
ಮುಡಿದ ಮಲ್ಲಿಗೆ ಹೂವು ಎಡಬಲಕುದುರೆ ಪಾ- ।
ಲ್ಗಡಲೊಡೆಯನ ಪಾಡುತ ಚದುರೆಯರು ॥ ೩ ॥

ಹುಸಿನಿದ್ದೆಯಲಿ ಶ್ರೀಕೃಷ್ಣನು ಮಲಗಿರೆ ।
ಹಸಿದು ಆಕಳಿಸಿ ಬಾಯಾರುತಲಿ ॥
ಮುಸುಕಿನೊಳಿದ್ದು ಬೆಣ್ಣೆಯ ಬೇಡುತಲಿರೆ ।
ಶಶಿವದನನಿಗೆ ಬೆಣ್ಣೆಯ ನೀಡಲೋಸುಗ ॥ ೪ ॥

---

೧ ಖ೧ (೬) ಪ್ರತಿಯಿಂದ ತೆಗೆದುಕೊಂಡಿದೆ.

ಏಣಾಂಕಮುಖಿಯರು ಹೊಸಬೆಣ್ಣೆಯನು ತೆಗೆದು ।
ಪ್ರಾಣಪದಕ ಕೃಷ್ಣನಿಗೆ ಕೊಡಲು ॥
ಚಾಣೂರ ಮಲ್ಲನ ಗೆಲಿದು ಬಾರೆನುತಲಿ ।
ಜಾಣ ಪುರಂದರವಿಠಲನಪ್ಪಲು ಗೋಪಿ ॥ ೫ ॥

## ೨೯

ರಾಗ—ಧನ್ಯಾಸಿ    ತಾಳ—ಝಂಪೆ

೧ ಕಾಗೆ ಕಾಕಾ ಎನಲು ಹಕ್ಕಿ ಚಿಲಿಪಿಲಿ ಎನಲು ।
ಕೋಗಿಲೆಯು ಸ್ವರಗೆಯ್ಯಲು—ಕೃಷ್ಣ— ।
ನಾಗಸಂಪಿಗೆ ಅರಳಲು ॥ ಪ ॥

ಎದ್ದು ಮುಖ ತೊಳೆಯೇಳು ತಿದ್ದು ಕತ್ತುರಿತಿಲಕ ।
ಮುದ್ದೆಬೆಣ್ಣೆಯ ನಿನಗೆ ನಾನು ಕೊಡುವೆ ॥
ಹೊದ್ದಿರುವ ಕತ್ತಲದು ಹರಿದು ಬೆಳಗಾಯಿತೋ ।
ನಿದ್ದೆತಿಳಿದೇಳಯ್ಯ ಕೃಷ್ಣ ॥ ೧ ॥

ಬಿಸಿಯ ದೋಸೆಯು ಹೊಯ್ದು ಮೊಸರುಗಡ್ಡೆಯ ತೆಗೆದು ।
ಹೊಸದಾದ ಹಸುವಿನ ತುಪ್ಪವನ್ನು ॥
ಹಸನಾದ ಕಲಸನ್ನ ಹೆಸರು ಬೇಳೆಯ ಹುಗ್ಗಿ ।
ಹಸುಳೆ ನಿನಗಾರೋಗಣೆಗೆ ಮಾಡುವೆ ॥ ೨ ॥

ಎಂದಿಲ್ಲದಾ ಹಟವನಿಂದೇಕೆ ಮಾಡುತಿಹೆ ।
ಕಂದರೊಳಗತಿ ನೀನು ಹಟಿಯಾದೆಯು ॥
ಇಂದು ನೀನತ್ತರೇ ಎತ್ತಿಕೊಳ್ಳುವರಿಲ್ಲ ।
ಕಂದ ಅಳಬೇಡವೋ ಪುರಂದರವಿಠಲ ॥ ೩ ॥

೧ ಪ ಪ್ರತಿಯಿಂದ ತೆಗೆದುಕೊಂಡಿದೆ.

೩೦

ರಾಗ—ಮೋಹನ ತಾಳ—ಅಟ

೧ ಮಲಗಿ ಎದ್ದನು ರಂಗ, ಮಕ್ಕಳ ಮಾಣಿಕ ಕೃಷ್ಣ ।
ಛಲ ಹಿಡಿದನು ನೋಡೆ ಮೊಲೆಕೊಡೆ ಕೃಷ್ಣಗೆ ॥ ಪ ॥

ಜಲದೊಳು ತಮನ ಮರ್ದಿಸಿ ಅಂದು ಮತ್ಸ್ಯನಾಗಿ ।
ಬಲುಗಿರಿಯ ನೆಗಹಿ ಮರೆಮಾಡಿ ಕೂರ್ಮನಾಗಿ ॥
ನೆಲನ ಒಯ್ದವನ ಕೊಲುವೆನೆಂದು ವರಹನಾಗಿ ।
ಬಲುಭಕ್ತಿಗಾಗಿ ಕಂಬದಿ ನಾರಸಿಂಹನಾಗಿ ॥ ೧ ॥

ಚಿಕ್ಕ ರೂಪದಿಂದ ಬಲಿಯ ದಾನವ ಬೇಡಿ ।
ಉಕ್ಕಿನ ಕೊಡಲಿಯ ಪಿಡಿದ ಪರಶುರಾಮ ॥
ಮಿಕ್ಕಿದ ತಲೆಯ ಚೆಂಡಾಡಿದ ಶ್ರೀರಾಮ ।
ಸೊಕ್ಕಿದ ಕಂಸನ ಕೊಲುವೆನೆಂದ ಕೃಷ್ಣ ॥ ೨ ॥

ಬಲು ಪತಿವ್ರತೆಯರ ವ್ರತವನಳಿದ ಬುದ್ಧ ।
ಕಲಿಯಾಗಿ ಖಡುಗವ ಪಿಡಿದು ಕುದುರೆ ಏರಿ ॥
ಒಲಿದು ಭಕ್ತರನೆಲ್ಲ ಸಲಹುವೆನೆಂತೆಂದು ।
ಚೆಲುವ ಪುರಂದರವಿಠಲ ತೊಟ್ಟಿಲೊಳು ॥ ೩ ॥

೩೧

ರಾಗ—ಅಸಾವೇರಿ ತಾಳ—ಅಟ

೨ ಮಾಧವ ಮಧುಸೂದನ—ಯಾದವಕುಲರನ್ನ ಯ- ।
ಶೋದೆ ಕರೆದಳು ಬಾರೆಂದು—ಮುದ್ದಿಸಿ ಮಗನ ॥ ೧ ॥

---

೧ ಶ್ರೀ ಪ್ರತಿಯೊಂದರಲ್ಲಿಯೆ ಸಿಕ್ಕುತ್ತಿದೆ.
೨ ಮ ಪ್ರತಿಯೊಂದರಲ್ಲಿಯೆ ಸಿಕ್ಕುತ್ತಿದೆ.



ಅಂಬೆಗಾಲ ಕೃಷ್ಣ

[ಕ. ಸಂ. ಸಂಸ್ಥೆಯ ಕೃಪೆ]

ಸಂಗಡಿಗರನೆಲ್ಲ ಬಿಟ್ಟು ಬಾರೈ ಚೆಲುವ ।
ಮುಂಗೈಯವಾಕು ಬೆರಳ ಹೊನ್ನುಂಗುರ ॥
ಝುಂಗಿಪ ಹುರಿಗೆಜ್ಜೆ ಉಡೆದಾರವನು ಕಂಡು ।
ಅಂಗನೆಯರು ನಿನ್ನನೊಯ್ವರೊ ॥
ಕಂಗಳ ಸಿರಿಯೆ ನೀ ಕಲ್ಪವೃಕ್ಷವೆ ಎಂದು ।
ಡಿಂಗರಿಗರು ಕಂಡರೆ ಬಿಡರೊ ನಿ- ॥
ನ್ನಂಘ್ರಿಯ ಮೇಲೆ ನೊಸಲನಿಡುವೆ ಕೃಷ್ಣ ।
ಕಂಗಳ ಸಿರಿಯೆ ಬಾರೋ—ರಂಗಯ್ಯ ॥ ೧ ॥

ಬಾಲಕರೊಡನಾಟ ಸಾಕು ಬಾ ಬಾರೈಯ ।
ನೀಲಾಂಗ ನಿನ್ನ ಮುಂದಲೆ ಮುತ್ತಿನರಳೆಲೆ ॥
ಕೀಲುಮಾಗಾಯಿ-ಮಾಣಿಕ ಪುಲಿಯುಗುರ ಕಂಡು ।
ಸೋಲ್ವರೊ ನಿನಗೇಸೋ ಸೋಗೆಯರು ॥
ಶ್ರೀಲೋಲ ನಿನ್ನಲಿ ಕಂಸನ ತುಂಬಿದೊ- ।
ಡ್ಡೋಲಗದೊಳು ರಕ್ಕಸರು ಪಂಥವನಾಡೆ ॥
ವೀಳ್ಯವ ಪಿಡಿದೆ ಕೊಲುವೆನೆಂದು ನಿನ್ನಯ ।
ಕಾಲಿಗೆ ಎರಗುವೆ ಬಾರೋ—ರಂಗಯ್ಯ ॥ ೨ ॥

ಬೊಮ್ಮದ ಮರಿಯೆ ವಿಶ್ವವನೆಲ್ಲ ಹೃದಯದೊ- ।
ಳೊಮ್ಮೆ ತೋರುಪನೆಂದು ಕಂಡು ನಾ ಬಲ್ಲೆ ॥
ಎಮ್ಮ ಮನಕೆ ಅಹಲ್ಲಾದನು ನೀನೇ ।
ಉಮ್ಮಯದಿಂ ಭಾಗವತರ ಪಾಲಿಸುತಿಪ್ಪ- ॥
ಗಮ್ಯಗೋಚರ ಸಿರಿಪುರಂದರವಿಠಲ ತೊರೆ- ।
ದಮ್ಮಿಯ ಕೊಡುವೆನು ಬಾರೋ—ರಂಗಯ್ಯ ॥ ೩ ॥

೩೨

ರಾಗ – ಕಲ್ಯಾಣಿ ತಾಳ— ಅಟ

೧ ಕಂದ ಹಾಲ ಕುಡಿಯೊ—ನಮ್ಮ ಗೋ- |
ವಿಂದ ಹಾಲ ಕುಡಿಯೊ || ಪ ||

ವೃಂದಾವನದೊಳು ಬಳಲಿ ಬಂದೆಯೊ ರಂಗ || ಅ.ಪ. ||

ಶೃಂಗಾರವಾದ ಗೋವಿಂದ—ಚೆಲುವ |
ಪೊಂಗೊಳಲೂದುವ ಚೆಂದ ||
ಅಂಗನೆಯರ ಒಲುಮೆಯಿಂದ—ನಮ್ಮ |
ಮಂಗಳಮೂರುತಿಯ ಮೋರೆ ಬಾಡಿತಯ್ಯ || ೧ ||

ಆಕಳೊಡನೆ ಹರಿದಾಡಿ—ನಮ್ಮ |
ಶ್ರೀಕಾಂತ ಗೆಳೆಯರ ಕೂಡಿ ||
ಲೋಕವ ಈರಡಿ ಮಾಡಿ—ನಮ್ಮ |
ಸಾಕುವ ಪಾದವು ಬಳಲಿದುವಯ್ಯ || ೨ ||

ಸದಮಲ ಯೋಗಿಗಳೆಲ್ಲ—ನಿನ್ನ |
ಪದವ ಬಣ್ಣಿಸುತಿಪ್ಪರೆಲ್ಲ ||
ಯದುಕುಲ ಚೌಪಟಮಲ್ಲ—ಹಾಲ |
ಹದನು ಮೀರಿತಯ್ಯ ಪುರಂದರವಿಠಲ || ೩ ||

---

೧ ಇ ಪ್ರತಿಯಿಂದ ತೆಗೆದುಕೊಂಡಿದೆ.
ದ ಪ್ರತಿಯಲ್ಲಿ ವಿಕಾರ ತುಂಬಿವೆ.

## ೩೩

ರಾಗ—ಮಾರಧನ್ಯಾಸಿ  ತಾಳ—ಆದಿ

೧ ಸೆರಗ ಬಿಡಯ್ಯ ಕೃಷ್ಣ—ಕರೆಯಲು ಪೋಪೆನು ।
ಕರುಗಳು ಹಸಿದಿವೆ ಕರುಣಿಗಳರಸನೆ ॥ ಪ ॥

ಕೆನೆವೊಸರನೆ ಕಡೆದು ನಿನಗೀವೆ ಬೆಣ್ಣೆಯ ।
ಗೊನೆಯ ಬಾಳೆಯ ಹಣ್ಣ ತಿನಲು ಕೊಡುವೆ ॥
ನೆನೆಗಡಲೆ ಕೊಬ್ಬರಿ ನಿನಗೆ ಮೆಲಲಿಕ್ಕುವೆ ।
ತನಯರೊಡನೆ ಆಡಕಳುಹುವೆ ರಂಗಯ್ಯ ॥ ೧ ॥

ಗೋವಳರೆಲ್ಲ ಬಂದು ಬಾಗಿಲೊಳಗೆ ನಿಂದು ।
ಗೋವುಗಳನು ಬಿಡಲು ಸಾರುತಿಹರು ॥
ನೋವುಗೊಳಿಸಬೇಡ ಪರರ ಮಕ್ಕಳ ನೀನು ।
ಭಾವಜನಯ್ಯನೆ ಲಾಲಿಸೀ ನುಡಿಯನು ॥ ೨ ॥

ಶರಧಿಯ ತಡಿಯಲಿ ನೆರೆದಿಪ್ಪ ಸತಿಯರ ।
ಪರಿಪರಿ ವಸ್ತ್ರವ ಸೆಳೆಯಬೇಡ ॥
ನೆರೆಮನೆ ಹೊರೆಮನೆ ಕರುಗಳ ಬಿಡಬೇಡ ।
ಸುರರಿಗೊಡೆಯ ನಮ್ಮ ಪುರಂದರವಿಠಲ ॥ ೩ ॥

## ೩೪

ರಾಗ—ಸೌರಾಷ್ಟ್ರ  ತಾಳ—ಆದಿ

೨ ಅಮ್ಮ ನಿಮ್ಮ ಮನೆಗಳಲ್ಲಿ ।
ನಮ್ಮ ಕೃಷ್ಣನ ಕಾಣಿರೇನೆ? ॥ ಪ ॥

---

೧ ದ ಪ್ರತಿಯಿಂದ ತೆಗೆದುಕೊಂಡಿದೆ.

೨ ಅ (೧೧) ಶ್ರೀ ಪ್ರತಿಗಳಿಂದ ಆರಿಸಿದೆ.

ಸುಮ್ಮನೆ ಸುರಸಜ್ಜನರ ಸಂಘ ।
ಗಮ್ಮನೆ ಮರುಳ ಮಾಡಿದನಮ್ಮ ॥ ಅ.ಪ. ॥

ಕುಂಕುಮ-ಕಸ್ತೂರಿ ಕಿರುತಿರುನಾಮವ ।
ಶಂಖ-ಚಕ್ರಗಳ ಧರಿಸಿದನ ॥
ಬಿಂಕದಲ್ಲಿ ಕೊಳಲೂದುವ ಹಾಡುವ—ನಮ್ಮ—
ಪಂಕಜನಾಭನ ಕಾಣಿರೇನೆ ? ॥ ೧ ॥

ಕಾಶಿಪಿತಾಂಬರ ಕೈಯಲಿ ಕೊಳಲು ।
ಪೂಸಿದ ಶ್ರೀಗಂಧ ಮೈಯಲಿ ॥
ಲೇಸಾದ ಪುಷ್ಪಮಾಲಿಕೆ ಹಾಕಿದ—ನಮ್ಮ— ।
ವಾಸುದೇವ ಹರಿ ಬಂದ ಕಾಣಿರೇನೆ ? ॥ ೨ ॥

ಕರದಲಿ ಕಂಕಣ ಬೆರಳಲಿ ಉಂಗುರ ।
ಕೊರಳಲಿ ಹಾಕಿದ ಹುಲಿಯುಗುರಮ್ಮ ॥
ಅರಳೆಲೆ ಕನಕಕುಂಡಲ ಕಾಲಲಂದಿಗೆ—ನಮ್ಮ— ।
ಉರಗಶಯನ ಬಂದ ಕಾಣಿರೇನೆ ? ॥ ೩ ॥

ಹದಿನಾರು ಸಾವಿರ ಗೋಪಸ್ತ್ರೀಯರ ಕೂಡಿ ।
ಚದುರಂಗ-ಪಗಡೆಯನಾಡಿದನ ॥
ಮದನಮೋಹನರೂಪ ಎದೆಯಲ್ಲಿ ಕೌಸ್ತುಭ—ನಮ್ಮ ।
ಮಧುಸೂದನ ಬಂದ ಕಾಣಿರೇನೆ ? ॥ ೪ ॥

ತೆತ್ತೀಸಕೋಟಿ ದೇವತೆಗಳು ಕೂಡಿ ।
ಹತ್ತವತಾರವ ಧರಿಸಿದನ ॥
ಸತ್ಯಭಾಮೆಯ ಅರಸ ಶ್ರೀಪುರಂದರವಿಠಲ ।
ನಿತ್ಯೋತ್ಸವ ಬಂದ ಕಾಣಿರೇನೆ ? ॥ ೫ ॥

## ೩೫

ರಾಗ—ಧನ್ಯಾಸಿ ತಾಳ—ಆದಿ

೧ ಬಣ್ಣಿಸಿ ಗೋಪಿ ತಾ ಹರಸಿದಳು ।
ಎಣ್ಣೆಯನೂಡುತ ಯದುಕುಲತಿಲಕನ ॥ ಪ ॥

ಆಯುಷ್ಯವಂತನಾಗು ಅತಿ ಬಲ್ಲಿದನಾಗು ।
ಮಾಯಾವಿ ಖಳರ ಮರ್ದನನಾಗು ॥
ರಾಯರ ಪಾಲಿಸು ರಕ್ಕಸರ ಸೋಲಿಸು ।
ವಾಯುಸುತಗೆ ನೀ ಒಡೆಯನಾಗೆನುತಲಿ ॥ ೧ ॥

ಧೀರನು ನೀನಾಗು ದಯಾಂಬುಧಿಯಾಗು ।
ಆ ರುಕ್ಮಿಣಿಗೆ ನೀನರಸನಾಗು ॥
ಮಾರನ ಪಿತನಾಗು ಮಧುಸೂದನನಾಗು ।
ದ್ವಾರಾವತಿಗೆ ನೀ ದೊರೆಯಾಗೆನುತಲಿ ॥ ೨ ॥

ಆನಂದ ನೀನಾಗು ಅಚ್ಯುತ ನೀನಾಗು ।
ದಾನವಾಂತಕನಾಗು ದಯವಾಗು ॥
ಶ್ರೀನಿವಾಸನಾಗು ಶ್ರೀಧರ ನೀನಾಗು ।
ಜ್ಞಾನಿ ಪುರಂದರವಿಠಲನಾಗೆನುತಲಿ ॥ ೩ ॥

## ೩೬

ರಾಗ—ಪಂತುರಾವಳಿ ತಾಳ—ಏಕ

೧ ಬೂಚಿ ಬಂದಿದೆ–ರಂಗ–ಬೂಚಿ ಬಂದಿದೆ ॥ ಪ ॥

---

೧ ಅ (ಅ) ಝು (೫–೧೦) ಮ ಪ್ರತಿಯಿಂದ ಆರಿಸಿದೆ.
೨ ಕ ಪ್ರತಿಯಿಂದ ತೆಗೆದುಕೊಂಡಿದೆ.

ಚಾಚಿ ಕುಡಿದು ಸುಮ್ಮನೆ ನೀ ।
ಪಾಚಿಕೊಳ್ಳೊ ಕೃಷ್ಣಯ್ಯ ॥ ಅ.ಪ. ॥

ನಾಕುಮುಖದ ಬೂಚಿಯೊಂದು ।
ಗೋಕುಲಕ್ಕೆ ಓಡಿಬಂದು ॥
ತೋಕರನ್ನು ಎಳೆದುಕೊಂಡು ।
ಕಾಕುಮಾಡಿ ಒಯ್ಯುವುದಕೆ ॥ ೧ ॥

ಮೂರು ಕಣ್ಣಿನ ಬೂಚಿಯೊಂದು ।
ಊರು ಊರು ಸುತ್ತಿ ಬಂದು ॥
ದ್ವಾರದಲ್ಲಿ ನಿಂದಿದೆ ನೋಡೊ ।
ಪೋರರನ್ನು ಒಯ್ಯುವುದಕೆ ॥ ೨ ॥

ಅಂಗವೆಲ್ಲ ಕಂಗಳುಳ್ಳ ।
ಶೃಂಗಾರ ಮುಖದ ಬೂಚಿ ॥
ಬಂಗಾರದ ಮಕ್ಕಳನೆಲ್ಲ ।
ಕಂಗೆಡಿಸಿ ಒಯ್ಯುವುದಕೆ ॥ ೩ ॥

ಆರು ಮುಖದ ಬೂಚಿಯೊಂದು ।
ಈರಾರು ಕಂಗಳದಕೆ ॥
ಬಾರಿ ಬಾರಿ ಅಳುವ ಮಕ್ಕಳ ।
ದೂರ ಸೆಳೆದು ಒಯ್ಯುವುದಕೆ ॥ ೪ ॥

ಮರದ ಮೇಲೆ ಇರುವುದೊಂದು ।
ಕರಿ ಕರಾಳದ ಮುಖದ ಬೂಚಿ ॥
ತರಳರನ್ನು ಎಳೆದುಕೊಂಡು ।
ಪುರಂದರವಿಠಲಗೊಪ್ಪಿಸಲಿಕ್ಕೆ ॥ ೫ ॥

## ೩೭

ರಾಗ—ಆನಂದಭೈರವಿ  ತಾಳ—ಆದಿ

೧ ಇವನ ಹಿಡಿದುಕೊಂಡು ಹೋಗೆಲೊ ಜೋಗಿ ।
ಇವ ನಮ್ಮ ಮಾತು ಕೇಳದೆ ಪುಂಡನಾದನು  ॥ ಪ ॥

ಆಡುತಾಡುತ ಬಂದು ಮಡುವಿನೊಳ್ ಮುಳುಗಿದ ।
ಬೇಡವೆಂದರೆ ಬೆಟ್ಟ ಬೆನ್ನಲಿ ನೆಗಹಿದ ॥
ಓಡುತೋಡುತ ಬಂದು ದಾಡೆಯಿಂದ ಸೀಳ್ವ ।
ನೋಡಹೋದರೆ ಕಣ್ಣ ತೆರೆದಂಜಿಸುವ  ॥ ೧ ॥

ಹುಲ್ಲಲಿ ಬ್ರಾಹ್ಮಣನ ಕಣ್ಣು ಕುಕ್ಕಿದ ಬುದ್ಧಿ ।
ಅಲ್ಲವೆಂದರೆ ಕೊಡಲಿಯ ಪಿಡಿದೆತ್ತಿದ ॥
ಬಿಲ್ಲನು ಎಡದ ಕೈಯಿಂದಲಿ ಎತ್ತಿದ ।
ಬಲ್ಲಿದ ಮಾವನ ಶಿರವನರಿದು ಬಂದ  ॥ ೨ ॥

ಬತ್ತಲೆ ಕುದುರೆಯ ಹತ್ತಬೇಡೆಂದರೆ ।
ಹತ್ತುವ ಶ್ರೀಕೃಷ್ಣ ಚೆಂದದಿಂದ ॥
ಭಕ್ತವತ್ಸಲ ನಮ್ಮ ಪುರಂದರವಿಠಲನ ।
ಅತ್ತ ಹಿಡಿದುಕೊಂಡು ಹೋಗಯ್ಯ ಜೋಗಿ  ॥ ೩ ॥

## ೩೮

ರಾಗ—ಕಲ್ಯಾಣಿ  ತಾಳ—ಅಟ

೨ ನಮ್ಮಪ್ಪ ಸುಮ್ಮಗಿರೊ–ಗೋಪಾಲಾ– ।
ಗುಮ್ಮನು ಎಳದೊಯ್ವನು  ॥ ಪ ॥

---

೧ ಅ (ಬಿಡಿ ಹ) ಪ್ರತಿಯಿಂದ ಆರಿಸಿದೆ.
೨ ಗ (B) ಪ್ರತಿಗಳೊಂದರಲ್ಲಿಯೆ ಸಿಕ್ಕಿದೆ.

ಎಡದ ಕೈಯಲಿ ಕಪಾಲ—ಗೋಪಾಲಾ— ।
ಬಲದ ಕೈಯಲಿ ತ್ರಿಶೂಲ ॥
ಚಳಿಬೆಟ್ಟದ ಹೆಣ್ಣು ನ್ಯೆಯೊಳಿಟ್ಟವನಂತೆ ।
ಅಲೆದು ಸ್ಮಶಾನವ ತಿರುಗುವನಂತೆ ॥ ೧ ॥

ಮೂರು ಕಣ್ಣಿನವನೊ—ಗೋಪಾಲಾ— ।
ಐದು ತಲೆಗಳವನೊ ॥
ದಾರಿಯ ಪೋಗುವ ನಾರಿಯನೆಳತಂದು ।
ಸೇರಿಸಿ ಶಿರದಲ್ಲಿ ಹೊತ್ತನೊ ॥ ೨ ॥

ಚಂದ್ರನರ್ಧವ ಪಿಡಿದು—ತಲೆಯ ಮೇಲೆ—
ಚೆಂದಕಿಟ್ಟಿರುವನಂತೆ ॥
ಅಂದಗಾರನಂತೆ [ ಅನಲನೇತ್ರನಂತೆ ] ।
ಮುಂದಿಪ್ಪ ಹುಡುಗನ ಕೊಂದು ತಿಂದವನಂತೆ ॥ ೩ ॥

ನಿನ್ನ ಮಗನ ಮಗನೊ—ಗೋಪಾಲಾ— ।
ಪನ್ನಗಭೂಷಣನೋ ॥
ಧನ್ಯನಾಗಿ ಶ್ರೀರಾಮನಾಮವನು ।
ಚೆನ್ನಾಗಿ ಚಿಂತಿಪನೊ ॥ ೪ ॥

ಕರಿಯಜಿನ ಪೊತ್ತವನೊ—ಗೋಪಾಲಾ— ।
ನೆರೆದ ಭೂತ ತಂದವನೊ ॥
ಶರಧಿಶಯನ ನಿನ್ನ ಚರಣಪಂಕಜಭೃಂಗ ।
ಪುರಂದರವಿಟ್ಠಲ ಪನ್ನಂಗಶಯನನೆ ॥ ೫ ॥

೩೯

ರಾಗ—ತೋಡಿ . ತಾಳ—ಅಟ

೧ ಗುಮ್ಮನ ಕರೆಯದಿರೆ—ಅಮ್ಮ ನೀನು ।
ಗುಮ್ಮನ ಕರೆಯದಿರೆ ॥ ಪ ॥

ಸುಮ್ಮನೆ ಇರುವೆನು ಅಮ್ಮಿಯ ಬೇಡೆನು ।
ಮಮ್ಮು ಉಣ್ಣುತೇನೆ ಅಮ್ಮ ಅಳುವುದಿಲ್ಲ ॥ ಅ.ಪ. ॥

ಹೆಣ್ಣುಗಳಿರುವಲ್ಲಿಗೆ—ಹೋಗಿ ಅವರ— ।
ಕಣ್ಣ ಮುಚ್ಚುವುದಿಲ್ಲವೆ ॥
ಚಿಣ್ಣರ ಬಡಿಯೇನು ಅಣ್ಣನ ಬೈಯೆನು ।
ಬೆಣ್ಣೆಯ ಬೇಡೆನು ಮಣ್ಣ ತಿನ್ನುವುದಿಲ್ಲ ॥ ೧ ॥

ಬಾವಿಗೆ ಹೋಗೆ ಕಾಣೆ—ಅಮ್ಮ ನಾನು— ।
ಹಾವಿನ ಮೇಲಾಡೆ ಕಾಣೆ ॥
ಆವಿನ ಮೊಲೆಯೂಡೆ ಕರುಗಳನ್ನು ಬಿಡೆ ।
ದೇವರಂತೆ ಒಂದು ಠಾವಲಿ ಕೂಡುವೆ ॥ ೨ ॥

ಮಗನ ಮಾತನು ಕೇಳುತ—ಗೋಪಿದೇವಿ— ।
ಮುಗುಳುನಗೆಯ ನಗುತ ॥
ಜಗದ ಒಡೆಯ ಶ್ರೀಪುರಂದರವಿಠಲನ ।
ಬಿಗಿದಪ್ಪಿಕೊಂಡಳು ಮೋಹದಿಂದಾಗ ॥ ೩ ॥

---

೧ ಓ ಪ್ರತಿಯೊಂದರಲ್ಲಿಯೆ ಸಿಕ್ಕಿದೆ.

೪೦

ರಾಗ—ಕಾಂಬೋದಿ ತಾಳ—ಅಟ

೧ ಸುಮ್ಮನಿರು ಬೇಡಿಕೊಂಬೆ ಕಾಡದಿರು ಕೃಷ್ಣ ।
ಉಮಾಪತಿಯೆಂಬ ಗುಮ್ಮ ಬಂದಿದೆಕೊ ॥ ಪ ॥

ಐದು ಮುಖ ಐದು ಈರೈದು ಕಣ್ಣುಗಳಿಂದ ।
ಐದು ಪಣೆಯೊಳಗಗ್ನಿ ಕಿಡಿಯುದುರುತ ॥
ಐದೆರಡು ತೋಳು ಭುಜಗಳ ಒಲಿದಾಡಿಸುತ ।
ಐದುಬಾಣಗೆ ಮುನಿದ ಗುಮ್ಮ ಬಂದಿದೆಕೊ ॥ ೧ ॥

ಬಾಲಚಂದ್ರನ ಪೊತ್ತುಕೊಂಡು ತ್ರಿಶೂಲದಿ ।
ಮೇಲೆ ಒರಲುವ ಭೂತಗಣಸಹಿತದಿ ॥
ಕಾಲಭೈರವನ ಕಾವಲಿಗಿರಿಸಿ ಮರುಳ್ಗಳ ।
ಸಾಲುಸಹಿತನಾಗಿ ಬಾಗಿಲಿಗೆ ಬಂದಿದೆಕೊ ॥ ೨ ॥

ಲಂಡದಾನವರ ಶಿರಗಳ ತರೆದು ಬಿರುದಿನ ।
ರುಂಡಮಾಲೆಯ ಧರಿಸಿ ಆರ್ಭಟಿಸುತ ॥
ಅಂಡಲೆದು ಅಷ್ಟದಿಕ್ಕುಗಳೆಲ್ಲ ಬೆದರಿಸುತ ।
ಪುಂಡರೀಕಾಕ್ಷನ ತೋರು ತೋರೆನುತ ॥ ೩ ॥

ಕರಿಚರ್ಮವ ಪೊದ್ದು ಕರದಿ ಓಡನೆ ಪಿಡಿದು ।
ಕರಿಜಡೆಗಳನೆಲ್ಲ ಕೆದರಿಕೊಳುತ ॥
ಹರಿವ ನೀರನು ನೆತ್ತಿಯೊಳು ಹೊತ್ತು ಹಾವುಗಳಾ- ।
ಭರಣ ಸಹಿತಾಗಿ ಬಾಗಿಲಿಗೆ ಬಂದಿದೆಕೊ ॥ ೪ ॥

---

೧ N ಪ್ರತಿಯಿಂದ ತೆಗೆದುಕೊಳ್ಳಲಾಗಿದೆ.

ಮುದಿಯೆತ್ತನೇರಿ ಮೈಯೆಲ್ಲ ಬೂದಿಯ ಪೂಸಿ ।
ಮದನಾರಿಯೆಂಬಂಥ ಬಲುಭೂತವು ॥
ಹೃದಯದಲಿ ನಿನ್ನ ನೋಳ್ಪೆನೆಂಬ ಧ್ಯಾನದಲಿ ।
ಒದಗಿ ಬಂದಿಹನಿದೊ ಪುರಂದರವಿಠಲ ॥ ೫ ॥

## ೪೧

ರಾಗ—ತೋಡಿ ತಾಳ—ಅಟ

೧ ಗುಮ್ಮನೆಲ್ಲಿಹ ತೋರಮ್ಮ—ನಮ್ಮಮ್ಮ— ।
ಸುಮ್ಮನಂಜಿಸಬೇಡಮ್ಮ ॥ ಪ ॥

ಪಂಚಾಶತ್ಕೋಟಿ ವಿಸ್ತೀರ್ಣದ ಭೂಮಿಯ ।
ವಂಚನೆಯಿಲ್ಲದೆ ತಿರುಗಿ ಬಂದೆನೆ ನಾನು ॥
ಹಂಚಿಸಿಕೊಟ್ಟೆನೆ ಅವರವರಿಗೆ ನಾ ।
ಅಂತು ನೋಡಿದರೂ ಕಾಣೆನೆ ಗುಮ್ಮನ ॥ ೧ ॥

ಈರೇಳು ಲೋಕವನುದರದೊಳಗೆ ಇಟ್ಟು ।
ತೋರಿದೆ ಬ್ರಹ್ಮಾಂಡ ಬಾಯೊಳಗೆ ॥
ಘೋರ ರೂಪದಿ ಬಂದ ಗಾಳಿಯಸುರನ ಕೊಂದೆ ।
ಅಲ್ಲಿ ನೋಡಿದರೂ ಕಾಣೆನೆ ಗುಮ್ಮನ ॥ ೨ ॥

ಕಾಳಿಯ ಮಡುಧುಮುಕಿ ಕಾಳಿಂಗನ ಹೆಡೆ ತುಳಿದು ।
ಮೇಲೆ ನಾಟ್ಯಂಗಳನಾಡುತಲಿದ್ದೆ ॥
[ ಓಲಿಯ ] ಭಾಗ್ಯವನಿತ್ತೆ ನಾಗಪತ್ನಿಯರಿಗೆ ।
ಅಲ್ಲಿ ನೋಡಿದರೂ ಕಾಣೆನೆ ಗುಮ್ಮನ ॥ ೩ ॥

---

೧ ಡು (೩) ಪ್ರತಿಯಿಂದ ತೆಗೆದುಕೊಂಡಿದೆ.
೩ ಪ್ರತಿಯಲ್ಲಿಯ ಐದು ನುಡಿಗಳನ್ನೇ ಇಟ್ಟುಕೊಂಡಿದೆ.

ಅಕ್ರೂರನಿಗೆ ವಿಶ್ವರೂಪವ ತೋರಿದೆ ।
ಥಕ್ಕನೆ ರಥವೇರಿ ಮಥುರೆಗೆ ಪೋದೆ ॥
ಸೊಕ್ಕಿದ ರಜಕನ ಕೊಂದು ಮಡಿಯನುಟ್ಟೆ ।
ಹೊಕ್ಕು ನೋಡಿದರೂ ಕಾಣೆನೆ ಗುಮ್ಮನ ॥ ೪ ॥

ಬಿಲ್ಲುಹಬ್ಬಕೆ ಹೋಗಿ ಮಲ್ಲರ ಮಡುಹಿದೆ ।
ಅಲ್ಲಿ ಮಾವನ ಕೊಂದು ಮುತ್ತಯ್ಯಗೊಲಿದೆ ॥
ಚೆಲ್ವಗೋಪಾಲ ಶ್ರೀಪುರಂದರವಿಠಲನ ।
ಸೊಲ್ಲು-ಸೊಲ್ಲಿಗೆ ನೀ ಬೆದರಿಸಬೇಡಮ್ಮ ॥ ೫ ॥

## ೩. ಬಾಲಲೀಲೆ

೪೨

ರಾಗ—ಬಿಹಾಗ್ ತಾಳ—ರೂಪಕ

೧ ಆಡ ಹೋಗೋಣ ಬಾರೊ ರಂಗ ।
ಓಡಿ ಹೋಗಲು ಬೇಡೊ ಕೃಷ್ಣ ॥ ಪ ॥

ಅಣ್ಣೆಕಲ್ಲು ಗೋಲಿ ಗಜುಗ ।
ಚಿಣ್ಣಿಕೋಲು ಚೆಂಡುಬುಗುರಿ ॥
ಕಣ್ಣುಮುಚ್ಚಾಲೆ ಹಲವು ಕೂಟ ।
ಬಣ್ಣದಾಟಗಳನೆಲ್ಲ ॥ ೧ ॥

ಸೋಲು-ಗೆಲುವಿಗೆಲ್ಲ ನೀನು ।
ಬಾಲಕರೊಳು ಕೂಡಿಕೊಂಡು ॥

---

೧ ಇ ಪ್ರತಿಯಿಂದ ತೆಗೆದುಕೊಂಡಿದೆ.

ಮೇಲೆ ಮಮತೆಯಿಂದೆ ಸಾನು- ।
ಕೂಲವಾಗಿ ನಡಸುವಂತೆ ॥ ೨ ॥

ಪುಟ್ಟ ಪುಟ್ಟ ಕೊಳಲು ಕಂಬಳಿ ।
ಕಟ್ಟಿ ಬುತ್ತಿ ಕೈಯಲಿ ಕೋಲು ॥
ದಿಟ್ಟ ಚೆಲುವನಾದ ಪುರಂದರ- ।
ವಿಟ್ಠಲ ಗೋವಳರ ರಾಯ ॥ ೩ ॥

೪೩

ರಾಗ—ಶ್ರೀ ತಾಳ—ಆದಿ

೧ ಬಂದನೇನೆ–ರಂಗ–ಬಂದನೇನೆ–ಎನ್ನ ।
ತಂದೆ ಬಾಲಕೃಷ್ಣ ನವನೀತಚೋರ ॥ ಪ ॥

ಘಿಲುಘಿಲು ಘಿಲುರೆಂಬ ಪೊನ್ನಂದುಗೆ ಗೆಜ್ಜೆ ।
ಹೊಳೆಹೊಳೆಯುವ ಪಾದ ಊರುತಲಿ ॥
ನಲಿನಲಿದಾಡುವ ಉಂಗುರ ಅರಳೆಲೆ ।
ಥಳಥಳಥಳ ಹೊಳೆಯುತ ಶ್ರೀಕೃಷ್ಣ ॥ ೧ ॥

ಕಿಣಿಕಿಣಿಕಿಣಿಯೆಂಬ ಕರದ ಕಂಕಣ ಬಳೆ ।
ಝಣಝಣಝಣರೆಂಬ ನಡುವಿನ ಗಂಟೆ ॥
ಗಣಗಣಗಣಯೆಂಬ ಪಾದದ ತೊಡವಿನ।
ಕುಣಿಕುಣಿಕುಣಿದಾಡುತ ಶ್ರೀಕೃಷ್ಣ ॥ ೨ ॥

ಓಡಿಓಡಿಓಡಿಯೆಂದು ಪುರಂದರವಿಠಲನ ।
ದುಡುದುಡುದುಡುದುಡು ಓಡುತ ॥
ನಡೆನಡೆನಡೆಯೆಂದು ಮೆಲ್ಲನೆ ಹಿಡಿಯಲು ।
ಬಿಡಿಬಿಡಿ ದಮ್ಮಯ್ಯ ಎನ್ನುತಲಿ ॥ ೩ ॥

೧ ಒಂದು ಪ್ರತಿಯಿಂದ ತೆಗೆದುಕೊಂಡಿದೆ.

೪೪

ರಾಗ—ಮೋಹನ ತಾಳ—ಆದಿ

[೧] ಆಡ ಹೋದಲ್ಲಿ ಮಕ್ಕಳು—ಎನ್ನನು— ।
ಆಡಿಕೊಂಬರು ನೋಡಮ್ಮ ॥ ಪ ॥

ನೋಡಿ ನೋಡಿ ಇತ್ತ ಮುಖವ ।
ಮಾಡಿ ಕಣ್ಣ ಮಿಟುವರಮ್ಮ ॥ ಅ. ಪ. ॥

ದೇವಕಿ ಪೆತ್ತಳಂತೆ—ವಸು- ।
ದೇವನೆಂಬವ ಪಿತನಂತೆ ॥
ಕಾವಲಿನೊಳು ಪುಟ್ಟಿದೆನಂತೆ ।
ಮಾವ ಕಂಸಗಂಜಿ ಬಂದೆನಂತೆ ॥ ೧ ॥

ನೀನೆನ್ನ ಪೆತ್ತಿಲ್ಲವಂತೆ—ಅಮ್ಮಾ— ।
ನಾನಿನ್ನ ಮಗನಲ್ಲವಂತೆ ॥
ಧೇನು ಕಾಯುವರಿಲ್ಲವೆಂದು ನೀನು ।
ಸಾನುರಾಗದಿ ಸಲಹಿದೆಯಂತೆ ॥ ೨ ॥

ವಿಷವು ತುಂಬಿದ ಮೊಲೆಯು—ಕೊಟ್ಟ ।
ಅಸುರೆಯ ಸಂಹರಿಸಿದೆನಂತೆ ॥
ಆಸುರನಾದ ಶಕಟನನಾಕ್ಷಣದಲಿ ।
ಶಿಶುವಾಗಲೆ ಒರೆಸಿದೆನಂತೆ ॥ ೩ ॥

ವತ್ಸಾಸುರನನು ಕೆಡಹಿದೆನಂತೆ ।
ಕಿಚ್ಚನೆಲ್ಲವನು ನುಂಗಿದೆನಂತೆ ॥
ಕಚ್ಚಬಂದ ಕಾಳಿಂಗನಾ ಹೆಡೆ— ।
ಚಚ್ಚಿ ತುಳಿದು ಓಡಿದೆನಂತೆ ॥ ೪ ॥

---

೧ ಈ ಪ್ರತಿಯೊಂದರಲ್ಲಿಯೆ ಸಿಕ್ಕಿದೆ.

ಕುಸುಮಗಂಧಿಯರುಡುವ ।
ವಸನ ಕದ್ದು ಓಡಿದೆನಂತೆ ॥
ಹಸುಗೂಸು ಅಲ್ಲ ಇವ ।
ಅಸುರ ಮಗನು ಎಂತೆಂಬುವರೆ ॥ ೫ ॥

ಒರಳನೆಳೆತಂದು ಮತ್ತಿ- ।
ಮರವ ಮುರಿದೋಡಿದೆನಂತೆ ॥
ತರಳೆಯರ ವಸ್ತ್ರವ ಕದ್ದು ।
ತರುವನೇರಿದೆನಂತೆ ॥ ೬ ॥

ಪರಮ ಗಾಡಿಕಾರನಿವ ।
ಪುರಂದರವಿಟ್ಠಲರಾಯ ॥
ತರುಣಿಯರ ವಂಚಿಸುತ್ತ ।
ಠಕ್ಕಿಸಿ ಪೋದನೆಂತೆಂಬುವರು ॥ ೭ ॥

## ೪೫

ರಾಗ—ಶಂಕರಾಭರಣ ತಾಳ—ಆದಿ

೧ ಕೂಡಿಕೊಂಡಾಡಲೊಲ್ಲರೊ—ರಂಗಯ್ಯ ನಿನ್ನ— ।
ಕೂಡಿಕೊಂಡಾಡಲೊಲ್ಲರೊ— ॥ ಪ ॥

ಕೇಡಿಗನಿವ ನಮ್ಮ ಕೆಲಸ ಕೆಡಿಪನೆಂದು ॥ ಅ. ಪ. ॥

ತನ್ನ ತಾಯ ಒಡಹುಟ್ಟಿದಣ್ಣನ ಕೊಂದವನಿವ ।
ಅನ್ನಿಗರ ಬಿಡುವನೆ ? ಎಂದೆಲ್ಲರು ಮಾತಾಡಿಕೊಂಡು ॥ ೧ ॥

ತರಳ ಪುಟ್ಟನೆಂದು ಕರೆದು ಸಲಹಿದರೆ ।
ಬೆರಳನೆಣಿಸಿ ಕೊಂದ ಕೊಲೆಗಾರನೆಂದು ನಿನ್ನ ॥ ೨ ॥

---

೧ ಶ್ರೀ ಪ್ರತಿಯೊಂದರಲ್ಲಿಯೆ ಸಿಕ್ಕಿದೆ.

ಆವ ಕಾಯುತ ಹೋಗಿ ಹಾವಿನ ಮಡುವ ಧುಮುಕಿ
ಠಾವವಿಲ್ಲಮಾಡಿದ ಕೇವಲ ಹೀನನೆಂದು || ೩ ||

ಗೊಲ್ಲತಿಯರ ಮನೆ ಪೊಕ್ಕು ಪಾಲ್ಬೆಣ್ಣೆ ಮೊಸರುಗಳ |
ನಿಲ್ಲದೆ ತಿಂಬುವನಿವ ಕಳ್ಳ ಕೃಷ್ಣನೆಂದು || ೪ ||

ಕರುಣಾಕರ ಸಿರಿ ಪುರಂದರವಿಠಲನೆ |
ಧರೆಯ ನರರು ನಿನ್ನ ಚರಿಯ ಪರಿಯ ಕಂಡು || ೫ ||

೪೬

ರಾಗ—ರೇಗುಪ್ತಿ ತಾಳ—ಅಟ

ಆಡ ಹೋಗಲು ಬೇಡವೊ-ರಂಗಯ್ಯ |
ಬೇಡಿಕೊಂಬೆನು ನಿನ್ನನು || ಪ ||

ಆಡ ಹೋಗಲುಬೇಡ ಗಾಡಿಕಾರ್ತಿಯರೊಳು |
ಕೂಡಿ ಕೆಡಲುಬೇಡವೊ-ರಂಗಯ್ಯ || ಅ.ಪ. ||

ನೀರೊಳು ಮುಳುಗೆಂಬರೊ-ನಿನ್ನನು ದೊಡ್ಡ |
ಭಾರವ ಹೊರು ಎಂಬರೊ ||
ಕೋರೆದಾಡೆಗಳಿಂದ ಸೀಳಿ ರಕ್ಕಸನೊಡಲ |
ಹಾರವ ಹಾಕೆಂಬರೊ-ರಂಗಯ್ಯ || ೧ ||

ಪೊಡವಿಯನಳೆಯೆಂಬರೊ—ನಿನಗೆ ದೊಡ್ಡ |
ಕೊಡಲಿಯ ಪಿಡಿಯೆಂಬರೊ ||
ಕಿಡಿಗಣ್ಣ ರುದ್ರನ ವರದ ದಶಕಂಠನ |
ಮಡುಹಿ ನೀ ಬಾರೆಂಬರೊ-ರಂಗಯ್ಯ || ೨ ||

---

೧ ಅ (೧) ಪ್ರತಿಯಿಂದ ತೆಗೆದುಕೊಂಡಿದೆ.
ಈ ಪ್ರತಿಯಲ್ಲಿ ಪೂರ್ಣ ವಿಕಾರಗೊಂಡಿದೆ.

ಬೆಟ್ಟವನೆತ್ತೆಂಬರೊ–ನಿನ್ನನು ಬರಿ- ।
ಬಟ್ಟಾಗಿ ತಿರುಗೆಂಬರೊ ॥
ಪುಟ್ಟ ತೇಜಿಯನೇರಿ ನಲಿನಲಿದಾಡುತ ।
ದಿಟ್ಟ ಪುರಂದರವಿಠಲ-ರಂಗಯ್ಯ ॥ ೩ ॥

## ೪೭

ರಾಗ—ಆನಂದಭೈರವಿ ತಾಳ—ಅಟ

೧ ಹೊರಹೋಗಿ ಆಡದಿರೊ ಹರಿಯೆ—ಎನ್ನ ದೊರೆಯೆ ॥ ಪ ॥

ಮನೆಯೊಳಗಾಡುವುದೆ ಚೆಂದ—ನೆರೆ- ।
ಮನೆಗಳಿಗೇಕೆ ಪೋಗುವೆಯೊ ಮುಕುಂದ ॥
ವನಿತೆಯರು ಮೋಹದಿಂದ—ನಿನ್ನ ।
ಮನವಪಹರಿಸಿಕೊಂಬುವರೋ ಗೋವಿಂದ ॥ ೧ ॥

ಏನು ಬೇಡಿದರೂ ನಾ ಕೊಡುವೆ—ಕೆನೆ- ।
ಬೆಣ್ಣೆ ಕಜ್ಜಾಯವ ಕೈಯೊಳಗಿಡುವೆ ॥
ನಿನ್ನ ಗುಣಗಳನು ಕೊಂಡಾಡುವೆ—ನಿನಗೆ ।
ಚಿನ್ನರನ್ನದ ಅಲಂಕಾರಗಳಿಡುವೆ ॥ ೨ ॥

ಹೊಲಸು ಮೈಯವನೆನ್ನುವರೊ—ದೊಡ್ಡ ।
ಕುಲಗಿರಿಯನ್ನು ಪೊತ್ತವನೆನ್ನುವರೊ ॥
ಬಲುಕೇಶದವನೆನ್ನುವರೊ—ಆ ।
ಎಳೆಯನನೆತ್ತಿದ ಕುರೂಪಿಯೆಂಬುವರೊ ॥ ೩ ॥

ಭಿಕ್ಷೆ ಬೇಡಿದೆ ಎಂಬುವರೊ—ಭೂಮಿ ।
ರಕ್ಷಿಸ ರಾಯರ ಕಡಿದೆಯೆಂಬುವರೊ ॥

೧ ಷ್ಟು ( ೭ ) ಪ್ರತಿಯಿಂದ ತೆಗೆದುಕೊಂಡಿದೆ.

ಲಕ್ಷ್ಮಿಯ ಕಳೆದೆಯೆಂಬುವರೊ—ವೈ- ।
ಲಕ್ಷಣ ಬೆಣ್ಣೆಯ ಕದ್ದೆಯೆಂಬುವರೊ ॥ ೪ ॥

ಮಾನ ಬಿಟ್ಟವನೆನ್ನುವರೊ—ಮಹಾ ।
ಹೀನರ ಬೆನ್ನಟ್ಟಿ ಹೋದನೆಂಬುವರೊ ॥
ದಾನವವೈರಿಯೆಂಬುವರೊ—ಸುರ- ।
ರಾನತ ಪುರಂದರವಿಠಲನೆಂಬುವರೊ ॥ ೫ ॥

೪೮

ರಾಗ—ಪಂತುವರಾಳಿ ತಾಳ—ಅಟ

೧ ಮನೆಯೊಳಗಾಡೊ ಗೋವಿಂದ—ನೆರೆ- ।
ಮನೆಗಳಿಗೇಕೆ ಪೋಗುವೆಯೊ ಮುಕುಂದ ॥ ಪ ॥

ನೊಸಲಿಗೆ ತಿಲಕವನಿಡುವೆ—ಅಚ್ಚ- ।
ಹೊಸಬೆಣ್ಣೆಯಿಕ್ಕಿ ಕಜ್ಜಾಯವ ಕೊಡುವೆ ॥
ಹಸನಾದಾಭರಣಗಳಿಡುವೆ—ಚಿಕ್ಕ- ।
ಹಸುಳೆ ನಿನ್ನನು ನೋಡಿ ಸಂತೋಷಪಡುವೆ ॥ ೧ ॥

ಅಣ್ಣಯ್ಯ ಬಲರಾಮಸಹಿತ—ನೀ- ।
ನಿನ್ನೆಲ್ಲಿಯಾದರೂ ಆಡುವುದು ವಿಹಿತ ॥
ಹೆಣ್ಣುಗಳೇಕೋ ಸಂಗಾತ—ರಂಗ ।
ಬಿನ್ನಪ ಪರಿಪಾಲಿಸೊ ಜಗನ್ನಾಥ ॥ ೨ ॥

ಜಾರನೆನಿಸಿಕೊಳಲೇಕೆ—ರಂಗ- ।
ಚೋರನೆನಿಸಿಕೊಂಬ ದೂರು ನಿನಗೇಕೆ ॥

---

೧ ಝ (ಲ) ಶ್ರೀ ಪ್ರತಿಗಳಿಂದ ಆರಿಸಿದೆ.

ವಾರಿಜಾಕ್ಷಿಯರ ಕೂಡಲೇಕೆ—ನಮ್ಮ— ।
ಪುರಂದರವಿಟ್ಠಲರಾಯ ಎಚ್ಚರಿಕೆ ॥ ೩ ॥

## ೪೯

**ರಾಗ—ಶಂಕರಾಭರಣ** **ತಾಳ—ಅಟ**

೧ ಪೋಗದಿರೆಲೊ ರಂಗ—ಬಾಗಿಲಿಂದಾಚೆಗೆ ।
ಭಾಗವತರು ಕಂಡರೆತ್ತಿಕೊಂಡೊಯ್ವರೊ ॥ ಪ ॥

ಸುರಮುನಿಗಳು ತಮ್ಮ ಹೃದಯಗಹ್ವರದಲಿ ।
ಪರಮಾತ್ಮ ನಿನ್ನ ಕಾಣದರಸುವರೊ ॥
ದೊರಕದ ವಸ್ತುವು ದೊರಕಿತು ತಮಗೆಂದು ।
ಹರುಷದಿಂದ ನಿನ್ನ ಕರೆದೆತ್ತಿಕೊಂಬರೊ ॥ ೧ ॥

ಅಗಣಿತಗುಣ ನಿನ್ನ ಜಗದ ನಾರಿಯರೆಲ್ಲ ।
ಹಗರಣ ಮಾಳ್ಪರೊ ಗೋಪಾಲನೆ ॥
ಮುಗುಗಳ ಮಾಣಿಕ್ಯ ತಗುಲಿತು ಕರಕೆಂದು ।
ಮಿಗಿಲು ವೇಗದಿ ಬಂದು ಬಿಗಿದಪ್ಪಿಕೊಂಬರೊ ॥ ೨ ॥

ದಿಟ್ಟ ನಾರಿಯರು ತಮ್ಮಿಷ್ಟವ ಸಲಿಸೆಂದು ।
ಅಟ್ಟಟ್ಟ ಬೆಂಬತ್ತಿ ತಿರುಗುವರೊ ॥
ಸೃಷ್ಟೀಶ ಪುರಂದರವಿಟ್ಠಲರಾಯನೆ ।
ಇಷ್ಟಿಷ್ಟು ಬೆಣ್ಣೆಯ ಕೊಡುವೆನೊ ರಂಗಯ್ಯ ॥ ೩ ॥

---

೧ ಪ್ರಚಾರದಲ್ಲಿರುವ ಪಾಠವನ್ನು ತೆಗೆದುಕೊಳ್ಳಲಾಗಿದೆ.
೩ ಮತ್ತು ಧು (೯–೧೦) ಪ್ರತಿಗಳಲ್ಲಿ ಈ ಹಾಡು ಬೇರೆ ರೂಪದಲ್ಲಿದೆ.

## ೫೦

ರಾಗ—ಶಂಕರಾಭರಣ ತಾಳ—ಆದಿ

[೧] ಕಣ್ಣ ಮುಂದಿರೊ–ರಂಗ–ಕಣ್ಣ ಮುಂದಿರೊ ॥ ಪ ॥

ಪೂತನಿಯ ಮೊಲೆಯನುಂಡು ।
ವಾತಶಕಟಾದಿ ದೈತ್ಯರ ॥
ಘಾತಿಸಿದ ರಂಗ ನಿನ್ನ ।
ಪೋತತನಕಂಜುವೆನು ॥ ೧ ॥

ಕಡಹದ ಮರವನೇರಿ ।
ಮಡುವ ಧುಮುಕಿ ನೋಡಿ ॥
ಹೆಡೆಯ ತುಳಿದ ನಿನ್ನ ।
ದುಡುಕಿಗಂಜುವೆನು ॥ ೨ ॥

ಬಾಲೆಯರ ಮನೆಗೆ ಪೋಗಿ ।
ಹಾಲು-ಮೊಸರ ಕದ್ದು ॥
ಲೀಲೆ ಮಾಡದಿರಯ್ಯ ।
ಲೋಲ ಪುರಂದರವಿಠಲ ॥ ೩ ॥

## ೫೧

ರಾಗ—ಸಾರಂಗ ತಾಳ—ಆದಿ

[೨] ಪೇಳಲಳವೆ ನಿನ್ನ ಮಹಿಮೆಯ—ಶ್ರೀರಂಗ ಧಾಮಾ ।
ಸೇಳಲಳವೆ ನಿನ್ನ ಮಹಿಮೆಯ ॥ ಪ ॥

---

೧ ಇ ಮತ್ತು ದ ಪ್ರತಿಗಳಿಂದ ತೆಗೆದುಕೊಂಡಿದೆ.

೨ ಅ ( ಬಿಡಿ ೨–೩ ) ಪ್ರತಿಗಳಲ್ಲಿ ಮಾತ್ರ ಸಿಕ್ಕುತ್ತಿದೆ.

ನೀಲ ಮೇಘಶ್ಯಾಮ ನಿನ್ನ ।
ಬಾಲಲೀಲೆಯಾಟವ ॥ ಅ.ಪ. ॥

ವಿಷದ ಮೊಲೆಯ ಪೂತನಿಯ ।
ಅಸುವ ಹೀರಿದ ಶೂರನಾದೆ ।
ಉಸಿರಲಳವೆ ನಿನ್ನ ಮಹಿಮೆ ।
ಅಮ್ಮಮ್ಮಮ್ಮಮ್ಮಮ್ಮಮ್ಮ ॥
ಕೆಸರ ತಿನಬೇಡೆನುತ ತಾಯಿ ।
ಶಿಶುವಿನ ವದನವ ನೋಡಿದಳಾಗ ।
ದಶಚತುರ್ಭುವನವ ತೋರಿದ ಬಾಯೊಳ ।
ಗಲ್ಲಲ್ಲಲ್ಲಲ್ಲಲ್ಲೇ ॥ ೧ ॥

ಬಾಲಲೀಲೆಯಲ್ಲಿ ಬಂಡಿ ।
ಕಾಲಿಲೊದ್ದು ಶಕಟಾಸುರನ ।
ಮೂಲ ನಾಶ ಮಾಡಿದೆ ನೀ ।
ನಬ್ಬಬ್ಬಬ್ಬಬ್ಬಬ್ಬ ॥
ತಾಳಮರದ ನಡುವೆ ಒರಳ ।
ಕಾಲಿಗೆ ಕಟ್ಟೆಳೆಯುತಿರಲು ।
ಬಾಲ ಸತ್ತನೆಂದು ಗೋಪಿ ಅತ್ತ- ।
ಳಯ್ಯಯ್ಯಯ್ಯಯ್ಯಯ್ಯೊ ॥ ೨ ॥

ಸಣ್ಣವನಿವನಲ್ಲ ನಮ್ಮ ।
ಜೆಣ್ಣೆ ಕದ್ದು ಗೊಲ್ಲರ ಮನೆಯ ।
ಹೆಣ್ಣುಮಕ್ಕಳನು ಹಿಡಿದ ಕಳ್ಳ ।
ಎಲ್ಲೆಲ್ಲೆಲ್ಲೆಲ್ಲೆಲ್ಲೆ ॥
ನಿನ್ನಾಣೆಯಿಲ್ಲೆಂಬ ರಂಗನ ।
ಬಿನ್ನಾಣಕೆ ನಕ್ಕವರನು ಬಯ್ಯುತ ।
ಎನ್ನ ಕಂದ ಹುಸಿಯನಾಡ ।
ನೆಂದೆಂದೆಂದೆಂದೆಂದು ॥ ೩ ॥

ನಾರಿಯರೆಲ್ಲ ಬತ್ತಲೆಯಾಗಿ ।
ನೀರಾಟವನಾಡುತಿರಲು ।
ಸೀರೆಗಳೊಯ್ದು ಮರವನೇರಿದ- ।
ನತ್ತತ್ತತ್ತತ್ತತ್ತತ್ತ ॥
ವಾರಿಜಮುಖಿಯರು ಲಜ್ಜೆಯದೊರೆದು ।
ಸೀರೆಗಳನು ಬೇಡಲವರ ।
ಮೋರೆ ನೋಡಿ ರಂಗ ನಕ್ಕ ।
ಅಬ್ಬಬ್ಬಬ್ಬಬ್ಬಬ್ಬಬ್ಬ ॥ ೪ ॥

ಕಾಡು ಕಿಚ್ಚು ಮುಸುಕಿ ಗೋವ- ।
ವಾಡಿಯು ಬೆಂದದ್ದು ನೋಡಿ ।
ಈಡಿಲ್ಲದ ಉರಿಯ ತೀಡಿದ ।
ಅತ್ತತ್ತತ್ತತ್ತತ್ತತ್ತ ॥
೧ ಬೇಡಿದ ವರಗಳನೀವ ।
ಪುರಂದರವಿಠಲನ ಲೀಲೆಯ ।
ರೂಢಿಯೊಳೀತನ ಸಮರು ಯಾರು ।
ಇಲ್ಲಿಲ್ಲಿಲ್ಲಿಲ್ಲಿಲ್ಲಿಲ್ಲ ॥ ೪ ॥

---

೧ ಬಿಡಿ ( ೩ ) ರಲ್ಲಿ ಈ ಉತ್ತರಾರ್ಧವು ಹೀಗಿದೆ:—
ರೂಢಿಯೊಳಗಕ್ರೂರನು ಬಂದು ।
ಆಡಿಸಿದನು ಶ್ರೀಕೃಷ್ಣನ ಲೀಲೆಯ ।
ಮಾಡಿದ ಪುರಂದರವಿಟ್ಠಲರಾಯ ।
ಇಲ್ಲಿಲ್ಲಿಲ್ಲಿಲ್ಲಿಲ್ಲಿಲ್ಲ ॥

## ೫೨

### ಸುಳಾದಿ

#### ಧ್ರುವತಾಳ

೧ ಕಿನ್ನರ ಕಿಂಪುರುಷರು ನಭದಲಿ ಸುರ- |
ಕನ್ನಿಯರೊಡನಾಡಿ ಪಾಡುತಿರೆ |
ನಿನ್ನಾಳಾಗಿ ಗೋಪರು ಕೊಂಬು-ಕೊಳಲನೂದಿ |
ಕಿನ್ನರಿ ಮೌರಿಯ ತುತ್ತೂರಿ ಧ್ವನಿಗೆಯ್ಯೆ |
ರನ್ನದ ರತುನದಂದುಗೆ ಗೆಜ್ಜೆ ಘಿಲಿಘಿಲಿ |
ನಿನ್ನ ಮೂರುತಿ ನಿನ್ನ ಬಾಲಲೀಲೆ |
ಚೆನ್ನ ಮೂರುತಿ ಚೆನ್ನ ಕೀರುತಿ |
ಎನ್ನಾಳಿದ ಪುರಂದರವಿಠಲಜೀಯ ||೧||

#### ಮಟ್ಟತಾಳ

ಕೌಸ್ತುಭವಿಪ್ಪ ಕೊರಳಲಿ ಕಲ್ಲಿ-ಕಂಬಳಿಯನಿಡುವೆ |
ಕಂಜನಾಭಿಯಲ್ಲಿ ಕಲ್ಲಿಯ ಕಟ್ಟಿ ಮೆರೆವೆ |
ಕಂಜನಾಭ ಕಮಲೆಯ ನೂಪುರಗತಿಕ್ರಮಗಳಲೊಪ್ಪುವೆ |
ಕಂಜನಾಭ ಬಾಲಲೀಲೆಯು ನಿನಗೆ |
ಏನು ಪ್ರಿಯವೊ ಪುರಂದರವಿಠಲ ||೨||

#### ಆದಿತಾಳ

ನೀಲಮುತ್ತಿನ ದಂಡೆ ನೀಲಗುಂಜಿಯ ದಂಡೆ |
ಮೇಲುಮಂದಾರ ತುಲಸಿಯ ಪೂವಿನ ದಂಡೆ |
ಬಾಲಕರೊಡನಾಡುವ ದಂಡೆ |
ಮೇಲು-ಮೇಲ್ವಾಯ್ದು ಬಪ್ಪ ಖೇಚರ ಮುಖಿಗಳ ದಂಡೆ |

---

೧ ಇ (ಮುದ್ರಿತ) ಪ್ರತಿಯಿಂದ ತೆಗೆದುಕೊಂಡಿದೆ.

ಭಾಳಲೋಚನ ಪುರಂದರವಿನುತರಾಯ ।
ಮೇಳದ ಕಂದರ ಬಾಲಶಿಬಿರದಲೊಪ್ಪಿರು ।
ಸ್ವತೋ ಮಹೀಯಾನ್ ಗುಣಭರಿತ ।
ಪುರಂದರವಿಠಲರಾಯ ಅಣೋರಣೀಯಾನ್ ॥ ೩ ॥

### ರೂಪಕತಾಳ

ನಿನ್ನವನೆಂಬೆ ನೀ ಕೈವಿಡಿಯದೆ ।
ತನ್ನಯ ತನ್ನ ಸಾಧನ ಸಾಧಿಸದೆ ।
ನಿನ್ನಾಳುತನ ಸಿರಿ ಪುರಂದರವಿಠಲರಾಯ ।
ನಿನ್ನಾಳುತನ ॥ ೪ ॥

### ತ್ರಿವುಡೆತಾಳ

ಶ್ರುತಿಯ ತತಿಯ ಗತಿಯ ಗರುವನ ನೆಲೆಯ ।
ಕಂಡ ಕರ್ಮಠರುಗಳು ಬಲ್ಲರೆ ಜಗತ್ಪತಿಯ ನೆಲೆಯ ? ।
ಯತಿಯ ತತಿಯಾ ಪುರಂದರವಿಠಲರಾಯನ ।
ಕಂಡ ಕರ್ಮಠರುಗಳು ಬಲ್ಲರೆ? ॥ ೫ ॥

### ಝಂಪೆತಾಳ

ಶ್ರುತಿ-ಉಪನಿಷತ್ತುಗಳಲ್ಲಿ ಸ್ಮೃತಿ-ಪುರಾಣಾಗಮಗಳಲ್ಲಿ ।
ರತಿಪತಿಪಿತ ನಾರಾಯಣ ಚತುರ್ಮುಖ ಮುಖ್ಯ ದೇವತೆಯರಿಗೆ ।
ಗತಿ ಪುರಂದರವಿಠಲರಾಯ ॥ ೬ ॥

### ಅಟತಾಳ

ವೇದಗಳೆಂಬ ದಾವಣಿಯಲ್ಲಿ ನಾಮಗಳೆಂಬ ಮೂಗುನೇಣುಗಳಿಂದ ।
ಜೀವರುಗಳೆಂಬ ಎತ್ತುಗಳನೆ ಕಟ್ಟಿ ಕರ್ಮವೆಂಬ ಹೇರ ಹೇರಿಸಿ ।
ಆಡುವನು ಪುರಂದರವಿಠಲರಾಯ ।
ಇವನೊಬ್ಬನೇ ದೊಡ್ಡ ವ್ಯವಹಾರಿ ಕಾಣಿರೊ ॥ ೭ ॥

ಏಕತಾಳ

ಸಚರಾಚರವ ಪ್ರೇರಿಸುವರಾರಯ್ಯ ।
ಜಗದ್ಯಂತ್ರವಾಹಕರಾರಯ್ಯ ।
ಪುರಂದರವಿಠಲರಾಯನಲ್ಲದೆ ಸ್ವತಂತ್ರರಾರಯ್ಯ ! ॥ ೮ ॥

ಜತೆ

ನಿನ್ನನೆ ನಂಬಿದೆ ಮನ್ನಿಸಯ್ಯ ।
ಪುರಂದರವಿಠರಾಯ ನಿನ್ನನೆ ನಂಬಿದೆ ॥

# ೪. ಗೋಪೀಲೀಲೆ

೫೩

ರಾಗ—ಕಲ್ಯಾಣಿ ತಾಳ—ಆದಿ

೧ ನೀನಾರವ ಪೇಳೆನ್ನ ಕಣ್ಣ ಮುಚ್ಚುವೆ ।
ಮೌನಗೊಂಡರಿಯದಂತಿಪ್ಪ ಮಗುವೆ ! ॥ ಪ ॥

ಅತಿ ಚೆಲುವಿಗೆ ರತಿಪತಿಪಿತನೊ—ನೀ ।
ಶ್ರುತಿಸಕಲಾನ್ವಯ ಸನ್ನುತನೊ ॥
ಚತುರ್ದಶ ಭುವನವನಾಳಿದನೋ—ನೀ ।
ಶತತಪ್ಪುಗಳನೆಣಿಸಿದವನೊ? ॥ ೧ ॥

ವರಗೋಕುಲಕೊಪ್ಪುವ ದೊರೆಯೊ—ನೀ ।
ಕರಿವೈರಿಯ ಮದಪರಿಹಾರಿಯೊ ॥
ಗಿರಿಯನುದ್ಧರಿಸಿದ ನಖರುಚಿಯೊ—ನೀ ।
ಮುರದೈತ್ಯನ ಮಡುಹಿದ ಸಿರಿಯೊ? ॥ ೨ ॥

೧ ೮ (೨) ಪ್ರತಿಯಿಂದ ತೆಗೆದುಕೊಂಡಿದೆ.

ಮಂಗಳ ಶೋಭನ ಮಣಿಖಣಿಯೊ—ನೀ ।
ಹಿಂಗದೆ ಸ್ತುತಿಪರ ಗತಿದಾನಿಯೊ—ಗೋ- ॥
ಪಾಂಗನೆಯರ ಪ್ರಾಣದ ಧನಿಯೊ—ನೀ ।
ಸಿಂಗರ ಸೊಬಗಿನ ಶ್ರೀಪತಿಯೊ ॥ ೨ ॥

ಆಪತ್ತಿಗೆ ನೆನೆವರ ಗೋಚರನೊ—ನೀ ।
ಪಾಪಸಂಹರ ಪುರುಷೋತ್ತಮನೊ ॥
ಚಾಪದಿಂದಸುರರ ಗೆಲಿದವನೊ—ಸಾಂ- ।
ದೀಪನ ಮಗನ ತಂದಿತ್ತವನೊ? ॥ ೪ ॥

ಬೆಸಗೊಂಡಳು ಗೋಪಿ ನಸುನಗುತ—ಆಗ ।
ಯಶೋದೆಗೆ ಚತುರ್ಭುಜ ತೋರಿಸುತ ॥
ಅಸುರಾರಿಯ ಕಂಡು ಮುದ್ದಿಸುತ—ನೀ ।
ಶಿಶುವಲ್ಲ ಪುರಂದರವಿಠಲನುತ ॥ ೫ ॥

## ೫೪

ರಾಗ—ಕಾಪಿ ತಾಳ—ಆದಿ

೧ ಊರಿಗೆ ಬಂದರೆ ದಾಸಯ್ಯ—ನಮ್ಮ ।
ಕೇರಿಗೆ ಬಾ ಕಂಡೆ ದಾಸಯ್ಯ ॥ ಪ ॥

ಕೇರಿಗೆ ಬಂದರೆ ದಾಸಯ್ಯ—ಗೊಲ್ಲ- ।
ಕೇರಿಗೆ ಬಾ ಕಂಡೆ ದಾಸಯ್ಯ ॥ ಅ. ಪ. ॥

ಕೊರಳೊಳು ವನಮಾಲೆ ಧರಿಸಿದನೆ—ಕಿರು- ।
ಬೆರಳಲಿ ಗಿರಿಯನೆತ್ತಿದನೆ ॥

---

೧ ಅ (ಅ) ಪ್ರತಿಯಿಂದ ಆರಿಸಿಕೊಂಡಿದೆ.

ಇರುಳು-ಹಗಲು ಇಲ್ಲದಲಿ ಹಿರಣ್ಯನ ।
ಮರಣವ ಮಾಡಿದ ದಾಸಯ್ಯ ‖ ೧ ‖

ಮುಂಗೈಮುರಾರಿ ದಾಸಯ್ಯ—ಚೆಲುವ ।
ಪೊಂಗೊಳಲೂದುವ ದಾಸಯ್ಯ ‖
ಹಾಂಗೆ ಹೋಗದಿರು ದಾಸಯ್ಯ—ಹೊ- ।
ನ್ನುಂಗುರ ಕೊಡುವೆನು ದಾಸಯ್ಯ ‖ ೨ ‖

ಕಪ್ಪುವರ್ಣದ ದಾಸಯ್ಯ—ಕಂ- ।
ದರ್ಪನ ಪಿತನೆಂಬ ದಾಸಯ್ಯ ‖
ಒಪ್ಪಿಕೊಂಡು ಎನ್ನ ಮನೆಗೆ ಬಂದರೆ—ತೋಳ್ ।
ಕುಪ್ಪಸ ಕೊಡುವೆನು ದಾಸಯ್ಯ ‖ ೩ ‖

ಶಾಲು ಹೊದಿಸುವೆನು ದಾಸಯ್ಯ—ತುತ್ತು ।
ಹಾಲು-ಬೋನವುಣಿಸುವೆ ದಾಸಯ್ಯ ‖
ಕಾಲಿಗೆ ಬಿದ್ದೆನು ದಾಸಯ್ಯ—ವನ- ।
ಮಾಲೆಯ ಕೊಡುವೆನು ದಾಸಯ್ಯ ‖ ೪ ‖

ಸಿಟ್ಟು ಮಾಡಬೇಡ ದಾಸಯ್ಯ—ತಾಳು ।
ರೊಟ್ಟಿ ಸುಡುವನಕ ದಾಸಯ್ಯ—ತಂ- ।
ಬಿಟ್ಟನಾದರು ಮೆಲ್ಲೊ ದಾಸಯ್ಯ—ಪುರಂದರ- ।
ವಿಟ್ಠಲನೆಂಬ ದಾಸಯ್ಯ ‖ ೫ ‖

೫೫

ರಾಗ—ಸೌರಾಷ್ಟ್ರ ತಾಳ—ಅಟ

೧ ಏಕೆ ಗೋಪಾಲ ಕರೆಯುತಾನೆ—ಏಲೆ ಸಖಿಯೆ ಎನ್ನ— ।
ಏಕೆ ಗೋಪಾಲ ಕರೆಯುತಾನೆ? ‖ ಪ ‖

೧ ಗ (B) ಪ್ರತಿಯೊಂದರಲ್ಲಿಯೆ ಸಿಕ್ಕಿದೆ.

ಕಣ್ಣುಸನ್ನೆ ಮಾಡುತಾನೆ—ಮತ್ತೆ ಬಗೆಬಗೆ- ।
ಹಣ್ಣು ಕೈಯಲಿ ತೋರುತಾನೆ—ಎನ್ನ ಚೆಲುವಿಕೆ- ॥
ಬಣ್ಣಿಸುತಲಿ ತಿರುಗುತಾನೆ—ಇವನೇನೆ- ।
ಇನ್ನೂರು ವರಹಗಳ ಕೊಟ್ಟು ಮದುವೆಯಾದನೇನೆ—
ಎಲೆ ಸಖಿಯೆ ॥ ೧ ॥

ಹವಳಸರವ ತೋರುತಾನೆ—ದುಂಡುಮುತ್ತಿನ- ।
ಧವಳಹಾರವ ನೀಡುತಾನೆ—ಹಾಸಿಗೆಯ ಮೇಲೆ- ॥
ಪವಡಿಸಬೇಕೆನುತಾನೆ—ಇವನೊಡನಿರಲು ನ- ।
ಮ್ಮವರು ಸುಮ್ಮನೆ ಇಹರೇನೆ—ಎಲೆ ಸಖಿಯೆ ॥ ೨ ॥

ಬಟ್ಟಲ ಪಿಡಿದು ಬರುತಾನೆ—ಹಗಲೆ ಬಾ ಎಂದು- ।
ಬಟ್ಟಬಯಲೊಳು ಕರೆಯುತಾನೆ—ಎನ್ನ ಮನದೊಳು ॥
ಧಟ್ಟು ಧಿಗಿಲು ಎನ್ನದೇನೆ—ಪುರಂದರವಿಠಲ- ।
ಇಟ್ಟು ಕೊರಳಾಣೆ ಈಗ ಬಾ ಎಂಬುವನೆ—ಎಲೆ ಸಖಿಯೆ ॥ ೩ ॥

೫೬

ರಾಗ— ತಾಳ—

೧ ಆರು ಬಂದವರವ್ವ ಆರವನಲ್ಲದೆ ।
ಮಾರಜನಕನಾದ ಶೌರಿಯಲ್ಲದೆ ಮತ್ತೆ ॥ ಪ ॥

ಹೆಜ್ಜೆಗಳಿಡುತ ಕಾಣಿಸದಂತಿರೆ ಮೃದು- ।
ಗೆಜ್ಜೆಯ ದನಿ ಕೇಳಿ ಬರುತಲಿರೆ ॥
ವಜ್ರಮಾಣಿಕಹಾರ ಹರಿದು ನೆಲಕೆ ಬಿದ್ದು ।
ಮಜ್ಜಿಗೆಯೊಳಗಿನ ಬೆಣ್ಣೆ ಕಾಣೆನಮ್ಮ ॥ ೧ ॥

---

೧ ಖ೧ (೭) ಪ್ರತಿಯೊಂದರಲ್ಲಿಯೆ ಸಿಕ್ಕಿದೆ.

ಕೊಂಬು ಕೊಳಲ ತುತ್ತೂರಿ ಊದುತಲಿಕ್ಕು ।
ಇಂಬು ಕಸ್ತುರಿ ಪರಿಮಳ ಸೂಸುತ ॥
ಪೊಂಬಟ್ಟೆ ಚೆಲ್ಲಣ ಸೋಸಿದ ಮೊಸರಿನ ।
ಕುಂಭ ಒಡೆದು ಕೆಸರಾಗಿದೆಯಮ್ಮ ॥ ೨ ॥

ಮಿಂಚಿನಂದದಿ ಹೊಳೆಯುತ ಬದಿಯಲ್ಲಿದ್ದ ।
ಸಂಚಿತಾರ್ಥಗಳೆಲ್ಲ ಸೂರಾಡಿದ ॥
ವಂಚನೆಯಿಲ್ಲದೆ ಭಕ್ತರ ಸಲಹಿದ ।
ಸಂಚುಕಾರ ಪುರಂದರವಿಠಲನಲ್ಲದೆ ॥ ೩ ॥

## ೫೭

ರಾಗ—ಪಂತುವರಾಳಿ ತಾಳ—ಅಟ

೧ ಎಲ್ಲಿ ಬೆಣ್ಣೆಯ ಬಚ್ಚಿಡುವೆನಾ—ಈ ।
ಕಳ್ಳ ಕೃಷ್ಣನ ಹಾವಳಿ ಘನವಾಯಿತು ॥ ಪ ॥

ನೆಲುವು ನಿಲುಕದೆಂದಿಡುವೆನೆ—ನೋಡೆ ।
ಜೆಳೆಯಬಲ್ಲನಿವ ಬ್ರಹ್ಮಾಂಡಕೆ ॥
ತಿಳಿಸದೆ ಕತ್ತಲೊಳಿಡುವೆನೆ—ಅಕ್ಕ ।
ಬೆಳಕೆಲ್ಲವೀತನ ಕಂಗಳ ಢಾಳ ॥ ೧ ॥

ಎವೆಯಿಕ್ಕದಲ್ಲಿ ಕಾದಿಡುವೆನೆ—ನೋಡೆ ।
ದಿವಿಜರೆಲ್ಲ ಈತನ ಮಾಯೆ ॥
ಅವರ ಬಳಿಗೆ ಮೊರೆಯಿಡುವೆನೆ—ಅಕ್ಕ ।
ಇವನಿಟ್ಟ ಬಂಟರಿಂದ್ರಾದಿಗಳೆಲ್ಲರು ॥ ೨ ॥

೧ ೩ ಮುದ್ರಿತ ಪ್ರತಿಗಳಿಂದ ಆರಿಸಿಕೊಂಡಿದೆ.

ಈಗಲೆ ಇಂತು ಮಾಡುವನು—ಮುಂದೆ ।
ಆಗಲೀಸನು ನಮ್ಮ ಒಗೆತನವಮ್ಮ ॥
ಕೂಗಿ ಹೇಳಲು ಮತ್ತೆ ಕೇಡಮ್ಮ—ಮುಂದೆ ।
ಹೇಗೆ ಪುರಂದರವಿಠಲನಟ್ಟುಳಿಗೆ ? ॥ ೩ ॥

೫೮

ರಾಗ—ಕನ್ನಡ ಕಾಂಬೋದಿ ತಾಳ—ಅಟ

೧ ಕೂಗದೆ ಉಸುರಿಕ್ಕದೆ—ನೀವು ।
ಬೇಗನೆ ಬನ್ನಿ ರಂಗ ಮನೆಯ ಪೊಕ್ಕ ॥ ಪ ॥

ಹೆಜ್ಜೆಗಳಿವೆಕೋ ಮನೆಯಲಿ—ಕಾಲ ।
ಗೆಜ್ಜೆಯ ದನಿ ಕೇಳಬರುತಲಿದೆ ॥
ನಿರ್ಜರಪತಿ ತನ್ನ ಮನಸಿಗೆ ಬಂದಂತೆ ।
ಮಜ್ಜಿಗೆ ಓಕುಳಿ ಆಡಿಹನಕ್ಕ ॥ ೧ ॥

ಸೂರಿನ ಕೆಳಗೆ ಕುಳ್ಳಿರಿಸಿ—ತನ್ನ ।
ಓರಗೆ ಮಕ್ಕಳುಗಳ ನಿಲ್ಲಿಸಿ ॥
ಕೇರಿಕೇರಿಯಿಂದ ಗೋಡೆ ಧುಮುಕಿ ಪೋಗಿ ।
ಸೂರೆಗೊಳ್ಳುತಾನೆ ಸುಮ್ಮಗೆ ಬನ್ನಿ ॥ ೨ ॥

ಹಾಲು ಚೆಲ್ಲಿ ಹಳ್ಳ ಹರಿದಿಹವೆ—ಮೊಸರ ।
ಮೇಲಿನ ಕೆನೆಗಳು ಬಳಿದಿಹವೆ ॥
ಬಾಲಚೋರ ಶ್ರೀಪುರಂದರವಿಠಲನು ।
ಚಾಲುವರಿದರಿನ್ನು ಬಿಡಬಾರದಕ್ಕ ॥ ೩ ॥

---

೧ ಇ ಪ್ರತಿಯಿಂದ ಆರಿಸಿಕೊಂಡಿದೆ.

## ೫೯

ರಾಗ— ಎರಕಲಕಾಂಬೋದಿ ತಾಳ— ತ್ರಿವಿಡೆ

ಸಿಕ್ಕಿದನೆಲೆ ಜಾಣೆ ಶ್ರೀವೇಣುಗೋಪಾಲ ।
ಭಕ್ತವತ್ಸಲದೇವನು ॥ ಪ ॥

ಝುಕ್ಕಳ ಚೆಂಡಿಕೆ ಮರದ ಕೊನೆಗೆ ಕಟ್ಟಿ ।
ಗಕ್ಕನೆ ಕೃಷ್ಣ ಚೆಪ್ಪಾಳಿಕ್ಕಿದನಮ್ಮ ॥ ಅ. ಪ ॥

ಹೆಣ್ಣುಮಕ್ಕಳು ಬಚ್ಚಲೊಳಗೆಣ್ಣೆಮಂಡೆಯೊಳು ।
ಬಣ್ಣವಸ್ತ್ರವ ಬಿಚ್ಚಿ ಬರಿಮೈಯಲಿರುತಿರೆ ॥
ಕಣ್ಣಿಗೆ ಬಿಸಿನೀರ ಚೆಲ್ಲಿ ಸೀರೆಯನೊಯ್ದು ।
ಉನ್ನತವಾದ ವೃಕ್ಷವನೇರಿದನೆ ರಂಗ ॥ ೧ ॥

ಪಟ್ಟೆಮಂಚದ ಮೇಲೆ ಪತಿಯಂತೆ ಕುಳಿತಿರುವ ।
ಎಷ್ಟು ಸ್ವಾತಂತ್ರ್ಯವೆ ಗೋಪಿ ॥
ಉಟ್ಟ ಸೀರೆಯನೆಳೆದು ಒಟ್ಟೆಕುಚವ ಪಿಡಿದು ।
೨ ಅಪ್ಪು ಮಂದಿಗಳೊಳಗೆ ಗಟ್ಟಿ ಅಪ್ಪಿಕೊಂಡನೆ ॥ ೨ ॥

ಸಡಗರದಿಂದ ಗೋವಳಿತಿಯರೊಡಗೂಡಿ ।
ನುಡಿಸುತ ಕೊಳಲನು ಪುರದೊಳಗೆ ॥
ಕಡೆವ ಮಡದಿಯರ ಕೈಪಿಡಿದಾಡುವ ।
ಒಡೆಯನೆ ನಮ್ಮ ಶ್ರೀಪುರಂದರವಿಠಲ ॥ ೩ ॥

---

೧ ಅ (೧೧) ಪ್ರತಿಗಳಿಂದ ಆರಿಸಿಕೊಂಡಿದೆ.

೨ ಎಷ್ಟೆಂದು ಹೇಳಲಿ ಭ್ರಷ್ಟ ಮಾಡಿದನಮ್ಮ (ಮ)

೬೦

ಉಗಾಭೋಗ

೧ಸಿಕ್ಕಿದಿಯೆಲೊ ಸಿರಿಕೃಷ್ಣ ।
ಸಿಕ್ಕಿದಿಯೆಲೊ ನೀ ಕಳ್ಳರ ಗುರುವೆ ।
ಸಿಕ್ಕಿದಿಯೆಲೊ ಸಿರಿಕೃಷ್ಣ ।
ತಕ್ಕೆಯೊಳಪ್ಪದೆ ಬಿಡೆ ಪುರಂದರಠಲಯ್ಯ ॥

೬೧

ರಾಗ—ಹಿಂದೋಳ ತಾಳ—ಅಟ

೧ ತಾಳು ತಾಳೆಲೊ ರಂಗಯ್ಯ—ನೀ ।
ತಾಳು ತಾಳೆಲೊ ಕೃಷ್ಣಯ್ಯ ॥ ಪ ॥

ನಾಳೆ ನೀನು ನಮ್ಮ ಮನೆಗೆ ಬಂದರೆ ।
ಕಾಲ ಕಂಬಕೆ ಕಟ್ಟಿ ಪೇಳುವೆ ಗೋಪಿಗೆ ॥ ಅ. ಪ. ॥

ದೊರೆಗಳ ಮಗನೆಂಬುದಕೇನೊ—ಬಹು ।
ಧುರದಿ ಮನೆಯ ಪೊಕ್ಕ ಪರಿಯೇನೊ ॥
ದುರುಳತನದ ಬುದ್ಧಿ ಸರಿಯೇನೊ—ನೀನು ।
ತಿರಿದು ಬೇಡುಂಡದ್ದು ಮರೆತೆಯೇನೊ ॥ ೧ ॥

ಚಿಕ್ಕಮಕ್ಕಳು ಇಲ್ಲವಂತೆನೊ—ನಿನಗೆ ।
೨ಕಕ್ಕುಲಾತಿಯಿಂದಲಿ ನಿನ್ನ ॥

೧ ಝು ( ೩-೧೦ ) ಪ್ರತಿಯಿಂದ ತೆಗೆದುಕೊಂಡಿದೆ.
೨ ಓ ಪ್ರತಿಯಿಂದ ತೆಗೆದುಕೊಂಡಿದೆ.

ಸಿಕ್ಕಿದ ಶ್ರೀಲೋಲ ಹಿಡಿಹಿಡಿಯೆಂದರೆ ।
ಬಿಕ್ಕಿಬಿಕ್ಕಿ ಅತ್ತರೆ ಬಿಡುವರೇನೊ ॥ ೨ ॥

ಕಟ್ಟಿದ್ದ ತುರುಗಳ ವೊಲೆಯುಂಡು—ಕರು ।
ಬಿಟ್ಟ ಕಾರಣವೇನು ಹೇಳೊ ॥
ಸೃಷ್ಟೀಶ ಪುರಂದರವಿಟ್ಠಲರಾಯನೆ ।
ಇಟ್ಟಿಗೆಯ ಮೇಲೆ ಬಂದು ನಿಂತ ಕಾರಣವೇನೊ? ॥ ೩ ॥

೬೨

ರಾಗ—ತೋಡಿ                                        ತಾಳ—ಛಾಪು

೧ ಸೈಸಲಾರೆನೆ ಗೋಪಿ ನಿನ್ನ ಮಗನ ಲೂಟಿ ।
ಏಸೆಂದು ಪೇಳಲಮ್ಮ ॥
ವಾಸುದೇವನು ಬಂದು ಮೋಸದಿಂದಲಿ ಎನ್ನ ।
ವಾಸವ ಸೆಳಕೊಂಡು ಓಡಿ ಪೋದನಮ್ಮ ॥ ಪ ॥

ದೇವರ ಪೆಟ್ಟಿಗೆ ತೆಗೆದು ಸಾಲಿಗ್ರಾಮ ।
ಸಾವಿರ ನುಂಗುವನೆ ॥
ಭಾವಜನಯ್ಯ ಇದೇನೆಂದರೆ ನಿಮ್ಮ ।
ಕಾವ ದೇವರು ನಾನು ಕೇಳಿಕೊ ಎಂಬನೆ ॥ ೧ ॥

ಅಗ್ರೋದಕ ತಂದು ಜಗುಲಿ ಮೇಲಿಟ್ಟರೆ ।
ವೆಗ್ಗಳದಲಿ ಕುಡಿವ ॥
ಮಂಗಳಮುಹಿಮನ ಮಾಸಲೆಂದರೆ ನಿಮ್ಮ ।
ಮಂಗಳಮುಹಿಮನ ಅಪ್ಪನಾಸೆಂಬುವ ॥ ೨ ॥

೧ ಅ (೧) ಎ ಪ್ರತಿಗಳಿಂದ ಆರಿಸಿದೆ. ಎ ಪ್ರತಿಯಲ್ಲಿ ೪ನೆಯ ನುಡಿಯಿಲ್ಲ.

ಅಟ್ಟಡಿಗೆಯನೆಲ್ಲ ಉಚ್ಛಿಷ್ಟವ ಮಾಡಿ ।
ಅಷ್ಟು ತಾ ಬಳಿದುಂಬನೆ ॥
[ ಇಷ್ಟ ] ವಿಷ್ಣುದೇವರ ನೈವೇದ್ಯವೆಂದರೆ ನಿಮ್ಮ ।
ಇಷ್ಟದೇವರು ತೃಪ್ತನಾದನೆಂತೆಂಬುವ ॥ ೩ ॥

ಋತುವಾದ ಬಾಲೆಯರು ಪತಿಯೆಡೆ ಪೋಪಾಗ ।
ಕೃತಕದಿಂದಡಗಿಹನೆ ॥
ಮತಿಗೆಟ್ಟ ಪೆಣ್ಣೆ ಸುಂಕವ ಕೊಡು ಎನುತಲಿ ।
ಪ್ರತಿಯಾಗಿ ಮಾರನ ಸೂರೆಗೊಂಬುವನೆ ॥ ೪ ॥

ಅಚ್ಚ ಪಾಲು-ಮೊಸರು ನವನೀತ ಮಜ್ಜಿಗೆ ।
ರಚ್ಚೆ ಮಾಡಿ ಕುಡಿವ ॥
ಅಚ್ಚ ಪುರಂದರವಿಟ್ಠಲರಾಯನ ।
ಇಚ್ಛೆಯಿಂದಲಿ ನಿಮ್ಮ ಮನೆಗೆ ಕರೆದುಕೊಳ್ಳಿ ॥ ೫ ॥

## ೬೩

ರಾಗ—ಬಿಲಹರಿ ತಾಳ—ಅಟ

೧ ನಿನ್ನ ಮಗನ ಲೂಟಿ ಘನವಮ್ಮ—ಕರೆದು ।
ಚಿಣ್ಣಗೆ ಬುದ್ಧಿಯ ಹೇಳೇ ಗೋಪಮ್ಮ ॥ ಪ ॥

ಶಿಶುಗಳ ಕೈಲಿದ್ದ ಬೆಣ್ಣೆಗೆ ಉಳಿವಿಲ್ಲ ।
ಪಸು-ಕರುಗಳಿಗೆ ಮಾಸಲುಗಳಿಲ್ಲ ॥
ಮೊಸರ ಮಡಕೆಯಲಿ ಮಾರಿ ಹೊಕ್ಕಂತಾಯ್ತು ।
ಶಶಿಮುಖಿಯರು ಗೋಳಿಡುತಿಹರಮ್ಮ ॥ ೧ ॥

---

೧ ಇ (೧೦) ಖ೧ (೬) ಮ ಪ್ರತಿಗಳಿಂದ ಆರಿಸಿದೆ.

ಮರೆತು ಮಲಗಿದ್ದವರ ಮೊಲೆಗಳ ತಾನುಂಬ ।
ಕಿರಿಯ ಮಕ್ಕಳಿಗೆ ಮೊಲೆಹಾಲಿಲ್ಲವೊ ॥
ಹೊರಗೆ ಲೂಟಿ ಒಳಗೆ ಈ ಲೂಟಿ—ಎ- ।
ಚ್ಚರದ ಬಟ್ಟೆಯ ಕಾಣೆವಮ್ಮ ಗೋಪಮ್ಮ ॥ ೨ ॥

ಊರೊಳಗಿರಲೀಸ ಊರ ಬಿಟ್ಟು ಹೋಗಲೀಸ ।
ಈರೇಳು ಭುವನಕೆ ಒಡೆಯನಂತೆ ॥
ವಾರಿಜನಾಭ ಶ್ರೀಪುರಂದರವಿಠಲನ ।
ಕೇರಿಯ ಬಸವನ ಮಾಡಿ ಬಿಟ್ಟೆಯಮ್ಮ ॥ ೩ ॥

## ೬೪

ರಾಗ—ಸಾರಂಗ ( ಬಿಲಹರಿ ) ತಾಳ—ಅಟ

೧ ಸಣ್ಣವನ ಮತವಲ್ಲ ೨ ಸಾರಿ ಹೇಳಮ್ಮ ।
ಕಣ್ಣುಮುಚ್ಚಿ ೩ ಆಡುವಾಗ ಕಾಕು ಮಾಡಲೇತಕಮ್ಮ ॥ ಪ ॥

ಮೊಸರ ಕದ್ದರೆ ನಾವು ಮೊರೆಯಿಡ ಬಂದುದಿಲ್ಲ ।
ಪೊಸಕುಚಗಳ ಮುಟ್ಟಿ ಪೊಗಲೀಸನಮ್ಮ ॥
೪ ಹಸುಮಗನರಿಯದೆ ಆವಾಗಲೂ ಪಿಡಿವ ।
ಬಿಸರುಹಮೊಗ್ಗೆಯೆಂದು ಪಿಡಿವಡೇನಾಯ್ತಮ್ಮ ॥ ೧ ॥

ನವನೀತ ಬೇಡಿದರೆ ನಾವೇನೆಂಬುದಿಲ್ಲ ।
ಯುವತಿಯರಧರವ ಬೇಡಬೇಕೆ ? ॥

---

೧ ಈ ಹಾಡು ಕ. ವಿ. ವಿ. ತಾಳೆಗರಿ ( ಸಂ. ೨೩೯೨-೧೬೭೦ ) ಯಲ್ಲಿಯೂ, ತಾಳೆಗರಿ ( ಪ್ರ. ೧೬೫೪-೧೭೫೦ ) ಯಲ್ಲಿಯೂ ಸಿಕ್ಕುತ್ತಿದೆ.

೨ ಸಾಕು ( ೧೬೭೦ ).

೩ ನಮ್ಮನೆಲ್ಲ ( ೧೬೭೦ ).

೪ ಹಸುಮಗನಾದಾವಾಗ ಹಿಡಿದುಕೊಂಡಾಡುವ ( ೧೬೭೦ ).

ಅವನಾವಾಗಲು ಮೆಲ್ವ ಆಲದ ಪಣ್ಣೆಂದು ।
ಸವಿಗಂಡು ಬೇಡಿದರೆ ೧ ಸಾಧಿಸಲೀತಕಮ್ಮ ॥ ೨ ॥

ಭೂಮಿಗೆ ಲಂಡನು ನಮ್ಮ ಪುರುಷರಿಲ್ಲದ ವೇಳೆ ।
ಕಾಮಿಸಿ ಗಂಡನಂದದಿ ೨ ಕರೆಯುತ್ತೈದಾನೆ ॥
೩ ಪ್ರೇಮದಿ ಪುರಂದರವಿಠಲನ ನೆನೆದರೆ ।
ಕಾಮಿನಿಯರಿಗೆ ಕಲ್ಪವೃಕ್ಷ ಕೈಸೇರುವಂತೆ ॥ ೩ ॥

೬೫

ರಾಗ—ಕಲ್ಯಾಣಿ ತಾಳ—ಅಟ

೪ ತುಂಟನಿವನು ಕಾಣಮ್ಮ—ಗೋಪಾಲನು ।
ಉಂಟೋ ಇಲ್ಲವೊ ಕೇಳಮ್ಮ ॥ ಪ ॥

ಎಂಟೆರಡು ಸಾವಿರ ನಂಟರ ಹೆಂಗಳ ।
ತುಂಟುಮಾಡಿ ರವಿಕೆ ಗಂಟು ಬಿಚ್ಚಿ ನಿಂತ ॥ ಅ.ಪ. ॥

ಹಸಿರು ಪಟ್ಟೆಯನು ಉಟ್ಟು—ನಮ್ಮನೆ ಹೆಣ್ಣು ।
ಮೊಸರು ಕಡೆಯುತಿರಲು ॥
ನಸುನಗುತಲಿ ಬಂದು ಕುಸುಮಮಲ್ಲಿಗೆ ಮುಡಿಸಿ ।
ಬಸಿರುಮಾಡಿದನೆಂಥ ಹಸುಳನೆ ಗೋಪಿ ॥ ೧ ॥

---

೧ ಅದಕೇನಾಯ್ತು (೧೬೨೦).
೨ ಕಾಣುತಲೈದಾನೆ (೧೬೭೦).
೩ ಪ್ರೇಮದಿ ವರದ ಪುರಂದರವಿಠಲನೊಳು ।
ಕಾಮಿನಿಯರಿಗೆ ಮೋಹಕಲ್ಪವೃಕ್ಷವಲ್ಲವೆ ? ॥ (೧೬೭೦).
೪ ಗ (B) ಪ್ರತಿಯೊಂದರಲ್ಲಿಯೆ ಇದೆ.

ಮುದ್ದುನಾರಿಯರು ಕೂಡಿ—ನಮ್ಮನೆಯಲಿ ।
ಉದ್ದಿನ ವಡೆಯ ಮಾಡಲು ॥
ಸದ್ದು ಮಾಡದೆ ಬಂದು ಎದ್ದೆದ್ದು ನೋಡುತ ।
ಇದ್ದ ವಡೆಯನೆಲ್ಲ ಕದ್ದು ಮೆದ್ದೋಡಿದ ॥ ೨ ॥

ಗೊಲ್ಲಬಾಲಕರ ಕೂಡಿ—ಮನೆಯಲಿದ್ದ ।
ಎಲ್ಲ ಬೆಣ್ಣೆಯ ಮೆಲ್ಲಲು ॥
ಗುಲ್ಲು ಮಾಡದೆ ನಾವು ಎಲ್ಲರು ಒಂದಾಗಿ ।
ತಳ್ಳಹೋದರೆ ನಮಗೆ ಬೆಲ್ಲವ ತೋರಿದ ॥ ೩ ॥

ಹೊತ್ತು ಮುಳುಗುವ ಸಮಯದಿ—ನಮ್ಮನೆ ಹೆಣ್ಣು ।
ಹತ್ತಿ ಹೊಸೆಯುತಿರಲು ॥
ಮುತ್ತು-ಹವಳಸರ ಕತ್ತಿಗೆ ಹಾಕಿ ಸೀರೆ ।
ಎತ್ತಿ ನೋಡಿದನು ತಾ ಬತ್ತಲೆ ನಿಂತ ॥ ೪ ॥

ತಿಲಕಕತ್ತುರಿಯನಿಟ್ಟು—ನಮ್ಮನೆ ಹೆಣ್ಣು ।
ಗಿಲುಕುಮಂಚದಲಿರಲು ॥
ತಿಲಕತಿದ್ದುತ ಕುಚಕಲಶ ಪಿಡಿದು ತನ್ನ ।
ಕೆಲಸವ ತೀರಿಸಿದ ಪುರಂದರವಿಠಲ ॥ ೫ ॥

೬೬

ರಾಗ—ಧನ್ಯಾಸಿ ತಾಳ—ಆದಿ

೧ ಕಳವು ಕಲಿಸಿದೆಯಮ್ಮ ಗೋಪಿ ಕಮಲನಾಭಗೆ ।
ಉಳಿಸಿಕೊಂಡೆಯ ನಿಮ್ಮ ಮನೆಯ ಪಾಲು ಬೆಣ್ಣೆಯ ॥ ಪ ॥

---

೧ ಓ ಪ್ರತಿಯಿಂದ ತೆಗೆದುಕೊಂಡಿದೆ.

ಆರೂ ಏಳದ ಮುನ್ನ ಎಬ್ಬಿಸಿ ಶೃಂಗಾರ ಮಾಡಿ ।
ನೀರುಗಂಧವ ಹಚ್ಚಿ ಹಾರವ ಹಾಕಿ ॥
ಕೇರಿಕೇರಿ ಪಾಲು-ಬೆಣ್ಣೆ ಸೂರೆಮಾಡಿ ಬಾರೆನ್ನುತ ।
ವಾರಿಜನಾಭನ ಕಳುಹಿದೆ ವನಜನಯನನ ॥ ೧ ॥

ಚಿತ್ತಜನಯ್ಯನ ಕೈಗೆ ಚಿನ್ನದ ಚೆಂಡನೆ ಕೊಟ್ಟು ।
ಅರ್ತಿಯಿಂದ ಸಿಂಗರಿಸಿ ಆಡಿ ಬಾರೆಂದು ॥
ಕತ್ತಲೆ ಬೀದಿಯ ಸುತ್ತಿ ಕಸ್ತುರಿ ತಿಲಕವನಿಟ್ಟು ।
ನಿತ್ಯಾನಂದಗೆ ನಿಲುವುಗನ್ನಡಿಯ ತೋರಿ ॥ ೨ ॥

ಸಣ್ಣಮಲ್ಲಿಗೆ ಮುಡಿಸಿ ಬಣ್ಣದ ವಲ್ಲಿಯ ಹೊದಿಸಿ ।
ಹೆಣ್ಣುಗಳ ಒಲಿಸುವಂತೆ ಹೇಳಿ ಬುದ್ಧಿಯ ॥
ಹುಣ್ಣಿವೆ ಮಾಸಲ ಹಾಲು ಉಣ್ಣು ಉಣ್ಣು ವೆಲ್ಲೆನುತ್ತ ।
ಚಿಣ್ಣನ ಕಳುಹಿದೆಯಮ್ಮ ಉಣ್ಣಲಿಕ್ಕದೆ ॥ ೩ ॥

ವಾರಿಜಾಕ್ಷ ಮಾಡಿದಂಥ ದೂರು ಹೇಳಿದರೆ ನಿಮಗೆ ।
ದೂರುಬಡಕರೆಂದು ಗೋಪಿ ಬಯ್ವೆ ನಮ್ಮನು ॥
ಊರು ಮಾಡಿದ ಕೊಳಗ, ತಾಯಿ ಮಾಡಿದ ಹೊಟ್ಟೆ ।
ವಾರಿಜನಾಭನ ಕರೆದು ಬುದ್ಧಿಯ ಹೇಳೆ ॥ ೪ ॥

ಹೊಟ್ಟೆಬಾಕನಿವ ಜಿಟ್ಟದೊಡೆಯಗೆ ಪ್ರಿಯ ।
ಇಟ್ಟುಕೊಂಡಿರ್ದೀರೇಳುಭುವನ ಉದರದಲ್ಲಿಯೆ ॥
ಎಷ್ಟು ಹೇಳಿದರೂ ಕೇಳ ಏನು ಮಾಡಲಮ್ಮ ನಾನು ।
ಕಟ್ಟುಮಾಡಿಸಲುಬೇಕು ಪುರಂದರವಿಠಲಗೆ ॥ ೫ ॥

## ೬೭

ರಾಗ—ಕಲ್ಯಾಣಿ ತಾಳ—ಅಟ

೧ ಹೇಳಬಾರದೆ ಬುದ್ಧಿಯ—ಮಗನ ಊರ- |
ಗೋಳಿಯ ಮಾಡಿದೇನೆ ? || ಪ ||

ಮೇಳದಿ ಓರಗೆಯವರ ಕೂಡಿಕೊಂಡು |
ಹಾಳು ಮಾಡುತಾನೆ ಗೋವಳಗೇರಿಯ || ಅ.ಪ. ||

ಅಟ್ಟದ ಮೇಲಿಟ್ಟಿಹ—ಚಿಟ್ಟಿಗೆ ಹಾಲು |
ಬಟ್ಟನಿಕ್ಕಿ ಚೀಪುವ ||
ದುಷ್ಟತನವ ಮಾಡಬೇಡ ಅಯ್ಯಾ ಎನೆ |
ಕಷ್ಟವೇನೆಂಬೆ ಮುದ್ದಿಟ್ಟು ಓಡಿ ಪೋದ || ೧ ||

ಮೊಸರ ಮಥಿಸುತಿರಲು—ಬಂದು ಕುಳಿತ |
ಹಸುಗೂಸು ಎನುತಿದ್ದೇನೆ ||
ಕುಸುಮನಾಭನು ತನ್ನ ವಶವಾಗು ಎನುತಲಿ |
ವಸನ ತೆಗೆದು ಮೊಲೆ ಪಿಡಿದು ಹೋದ ಮೇಲೆ || ೨ ||

ಬೆಣ್ಣೆಯ ಕಂಡರಂತೂ—ಅದರ ರೂಪ |
ಕಣ್ಣಿಗೆ ತೋರನಲೆ ||
ಸಣ್ಣವನೆಂದು ಬಗೆದು ನಾ ಕರೆದರೆ |
ಒಣ್ಣದ ಮಾತಾಡಿ ಬಾ ಎಂದು ಕರೆವನು || ೩ ||

ಉಡುವ ಸೀರೆಯ ಕಳೆದು—ತಡಿಯಲಿಟ್ಟು |
ಮಡುವಿನೊಳ್ ಸ್ವೈದೋಕೆಯೆ ||
ಪಡಪಡ ಬಂದೊಯ್ದು ಕಡಹದ ಮರವೇರಿ |
ಕೊಡು ಕೃಷ್ಣ ಎನುತಿರೆ ಪಿಡಿ ಜೋಡುಕೈಯೆಂಬ || ೪ ||

---

೧ ಈ ಪ್ರತಿಯೊಂದರಲ್ಲಿಯೆ ಸಿಕ್ಕಿದೆ.

ಎಷ್ಟು ಹೇಳಲಿ ನಿನಗೆ—ಯಶೋದೆ ಒಂ- ।
ದಿಷ್ಟು ಕರುಣವಿಲ್ಲವೆ ॥
ಸೃಷ್ಟಿಗೊಡೆಯ ನಮ್ಮ ಪುರಂದರವಿಠಲ
........................................ ॥ ೫ ॥

೬೮

ರಾಗ—ಆನಂದಭೈರವಿ ತಾಳ—ಆದಿ

೧ ಗೋಕುಲದೊಳಗಿರಲಾರೆವಮ್ಮ—ಗೋಪಮ್ಮ ಕೇಳೆ ।
ಗೋಕುಲದೊಳಗಿರಲಾರೆವಮ್ಮ ॥ ಪ ॥

ಸಾಕು ಸಾಕು ನಮಗೇಕೆ ರಚ್ಚೆಗಳು ।
ಆ ಕೃಷ್ಣನ ಪರಿ ನೀ ಕೇಳಮ್ಮ ॥ ಅ.ಪ. ॥

ಹಾಲು-ಮೊಸರು ಕದ್ದರೆ ಕಳಲಿ—ಗೋಪಮ್ಮ ಕೇಳೆ ।
ಪೇಲಿಟ್ಟ ಬೆಣ್ಣೆ ಮೆದ್ದರೆ ಮೆಲಲಿ—ಗೋಪಮ್ಮ ಕೇಳೀ ॥
ರೇಳು ಭುವನದೊಳಾಡುತಲಿರಲಿ ॥
ಆಲದೆಲೆಯ ನಮ್ಮಾಲಯುವನೆ ಪೊಕ್ಕು ।
ಬಾಲೆಯರೆಲ್ಲರ ಬತ್ತಲೆ ಮಾಡಿ ॥
ಶಾಲೆಗಳೆಲ್ಲ ಮೇಲಕೆ ಹಾರಿಸಿ ।
ಆಲಿಂಗಿಸಿಕೊಂಡು ಬರುವನಮ್ಮ ॥ ೧ ॥

ತಾನಾಗಿ ಮನೆಗೆ ಬಂದರೆ ಬರಲಿ——ಬಾಹೊ ವೇಳೆಯಲಿ ।
ಅಣುಗರ ಕೂಡಿಕೊಂಡು ಬರಲಿ—ಕರೆತಂದರೆ ತರಲಿ ।
ಅನುಬಂಧನಾಗಿ ಇದ್ದರೆ ಇರಲಿ ॥

೧ ಮ ಪ್ರತಿಯಿಂದ ಆರಿಸಿಕೊಂಡಿದೆ.

ಅನುವು ಕಂಡುಕೊಂಡಾವೇಳೆಯಲಿ ।
ಉಣಬಿಟ್ಟಾಕಳಕರುಗಳನುಣಿಸಿ ॥
ಮನೆಯವರೆಲ್ಲರನೆಬ್ಬಿಸಿ ತಾನೇ ।
ಮನೆಯೆಲ್ಲವ ಸೂರಾಡಿದನಮ್ಮ ॥ ೨ ॥

ಬಾರಿಬಾರಿಗೆ ಮುನಿದ ಕಳ್ಳ—ಪತಿಯಂತೆ ತಾನು ।
ನೂರಾರು ಹೆಣ್ಣ ಕೂಡಿದನಲ್ಲ—ಗೋಪಮ್ಮ ಕೇಳೆ ।
ಯಾರ ಮುಂದೆ ಹೇಳಲಿ ಸೊಲ್ಲ ? ॥
ಓರಗೆಯಲಿ ಸಂಸಾರ ಮಾಡುವ ।
ನಾರಿಯರೆಲ್ಲರ ರಂಬಿಸಿ ಕರೆದು ವಿ- ।
ಕಾರ ಮಾಡದಂತೆ ಪುರಂದರವಿಠಲಗೆ ।
ಸಾರಿಸಾರಿ ನೀ ಬುದ್ಧಿ ಹೇಳಮ್ಮ ॥ ೩ ॥

೬೯

ರಾಗ—ಮೋಹನ ತಾಳ—ಅಟ

೧ ಗೋಪಿ ನಿನ್ನ ಮಗನಿಗಾಗೆ—ಕೇರಿಯ ಬಿಟ್ಟು ।
ಪೋಪೆವೆ ಬೆಳಗಾಗೆ ॥ ಪ ॥

ಮಕ್ಕಳನಾಡಗೊಡ—ಮನೆಯ ಹೊಕ್ಕು ।
ಉಕ್ಕುವ ಪಾಲ್ ಕುಡಿವ ॥
ಗಕ್ಕನೆ ಕಂಡೊಡನೆ ನಮ್ಮೆಲ್ಲರ ಕೈಗೆ ।
ಸಿಕ್ಕದೆ ಓಡಿದನೆ ॥ ೧ ॥

ಮೊಸರನೆಲ್ಲವ ಸುರಿದ—ಮೇಲಿಟ್ಟಂಥ ।
ಹೊಸಬೆಣ್ಣೆಗೆ ತಾ ಹಾರಿದ ॥

೧ ಈ ಪ್ರತಿಯಿಂದ ಅರಿಸಿದೆ

ಕೊಸರಿ ನೆಲುವಿನ ಮೇಲೇರಿದ ಕೃಷ್ಣ ತಾ ।
ಮುಸುಕಿನೊಳಗೆ ಸುರಿದ ॥ ೨ ॥

ಅಂತಿಂಥವನಲ್ಲ ಕಾಣೆ—ನಿನ್ನವ ಜಗ- ।
ದಂತರ್ಯಾಮಿಯು ಜಾಣೆ ॥
ಅಂತರಂಗದಲ್ಲಿ ನೋಡಲು ಪುರಂದರ- ।
ವಿಠಲ ಬಂದಿದ್ದ ಕಾಣೆ ॥ ೩ ॥

## ೭೦

ರಾಗ—ಸೌರಾಷ್ಟ್ರ ತಾಳ—ಅಟ

೧ ನಿನ್ನ ಮಗನ ಮುದ್ದು ನಿನಗಾದರೆ ಗೋಪಿ ಆರಿಗೇನೆ? ।
ಎನ್ನ ಕೂಡ ಸರಸವಾಡಲು ಓರಗೆಯೇನೆ? ॥ ಪ ॥

ಹೆಚ್ಚಿನ ಸತಿಯರ ಕಚ್ಚೆಯ ಬಿಚ್ಚುವ ಹುಚ್ಚನೇನೆ?—ಅಮ್ಮ ।
ಇಚ್ಛೆಯರಿತು ನಮ್ಮ ಗಲ್ಲವ ಕಚ್ಚುವ ನೆಚ್ಚನೇನೆ? ॥ ೧ ॥

ಚೆಂಡೆಂದು ಮಿಂಡೆಯರ ದುಂಡುಕುಚವ ಪಿಡಿವ ಗಂಡನೇನೆ? ।
ಕಂಡಕಂಡಲ್ಲಿ ಉದ್ದಂಡವ ಮಾಡುವ ಪುಂಡನೇನೆ? ॥ ೨ ॥

ಹೊಸ ಕೂಟವರಿತು ಹಾಸಿಗೆಯನು ಹಾಕುವ ಶಿಶುವು ಏನೆ? ।
ಅಸಹಾಯ ಶೂರ ಶ್ರೀಪುರಂದರವಿಟ್ಠಲರಾಯ ಕಾಣೆ ॥ ೩ ॥

---

೧ ಇ ಊ (ಖ) ಮ ಶ್ರೀ ಪ್ರತಿಗಳಿಂದ ಆರಿಸಿದೆ.
ಶ್ರೀ ಪ್ರತಿಯಲ್ಲಿ ೫ ನುಡಿಗಳಿವೆ.
ಕ ಮತ್ತು ಶ್ರೀ ಪ್ರತಿಗಳಲ್ಲಿ ಕೆಳಗಿನ ನುಡಿಯಿದೆ :
ಹುಸಿಯ ಹೇಳುವುದೇನು ಎದೆಯ ಬೆನ್ನ ಬಿಚ್ಚಿ ತೋರಲೇನೆ? ।
ಮುಸುಕು ತೆರೆದುಬಿಟ್ಟ ಮನೆಮನೆಯಲಿ ನಾನು ದೂರಲೇನೆ? ॥

## ೭೧

ರಾಗ—ಕೇದಾರಗೌಳ ತಾಳ—ಅಟ

[1] ಎಂಥ ಗಾಡಿಕಾರನೆ—ಕೃಷ್ಣಯ್ಯ ಇ- ।
ನ್ನೆಂಥ ಗಾಡಿಕಾರನೆ ? ॥ ಪ ॥

ಕಂತುಪಿತನು ಬೇಲಾಪುರದ ಚೆನ್ನಿಗರಾಯ ॥ ಅ.ಪ. ॥

ಹಿಂಡು ಕೂಡಿರುವ ಮಕ್ಕಳನೆಲ್ಲ ಬಡಿವರೆ ಲಂಡನೇನೆ—ಅಮ್ಮ ।
ಉಂಡು ಹಾಲು-ಬೆಣ್ಣೆ ಜೆಕ್ಕಿಗಿಕ್ಕುವರೆ ಪ್ರಚಂಡನೇನೆ ? ॥ ೧ ॥

ಹೆಚ್ಚು ಹೇಳುವುದೇನು ಬಿಚ್ಚಿ ಉರೋಜವ ತೋರುವನೆ—ಅಮ್ಮ ।
ಮುಚ್ಚುಮರೆಯೇತಕೆ ಮನೆಮನೆಗಳಲಿ ಪೋಗುವನೆ ॥ ೨ ॥

ವಸುಧೆಯೊಳಗೆ ನಂದಗೋಕುಲದೊಳಗೆ ತಾ ಬಂದ ಕಾಣೆ—ಅಮ್ಮ ।
ಹಸುಮಗನಾದನೀ ಪುರಂದರವಿಟ್ಠಲರಾಯ ಕಾಣೆ ॥ ೩ ॥

## ೭೨

ರಾಗ—ಯದುಕುಲಕಾಂಬೋದಿ ತಾಳ—ಅಟ

[2] ಎಂತಹ ಸಣ್ಣವನೆ—ನಿನ್ನ ಮಗನಂತಹರೆಲ್ಲಿಲ್ಲವೆ ।
ಹೊಂತಕಾರಿ ಬಲವಂತರಿಗಧಿಕನು ॥ ಪ ॥

ತರಳನಂತಿಪ್ಪನು ತರಳೆಯರೊಡನಾಡುವ ।
ಕಿರುಬೆರಳುಗುರಲಿ ಗಿರಿಯನೆತ್ತಿದವ ॥ ೧ ॥

೧ ಓ ಪ್ರತಿಯೊಂದರಲ್ಲಿಯೆ ಸಿಕ್ಕಿದೆ.

೨ ಇ ಮತ್ತು ಓ ಪ್ರತಿಗಳಿಂದ ಆರಿಸಿಕೊಂಡಿದೆ.

ಕಾಳಿಯ ಸರ್ಪನ ಕಾಲಲ್ಲಿ ತುಳಿದವ ।
ಪಲಾಯನಮಾಡಿ ಕಾಲಯವನನ ಸುಟ್ಟ ॥ ೨ ॥

ಕಿಚ್ಚು ಪಾನವ ಮಾಡಿ ಅಚ್ಚರಿ ತೋರಿದ ।
ರಚ್ಚೆ ಮಾಡುವಿರೆಂದು ಮುಚ್ಚಿಕೊಂಬುವಿಯಲ್ಲೆ ॥ ೩ ॥

ಬಾಯಿ ತೆರೆದನಲ್ಲೆ ನೀನಂಜುವಂದದಿ ।
ಆಯಮುಳಾರ್ಜುನರಾಯಾಸ ಬಿಡಿಸಿದ ॥ ೪ ॥

ದಿಟ್ಟತನದಿ ಮೊಲೆಗೊಟ್ಟವಳನು ಕೊಂದ ।
ಪುಟ್ಟ ಪುರಂದರವಿಟ್ಠಲರಾಯನು ॥ ೫ ॥

೭೩

ರಾಗ — ತಾಳ—ಅಟ

೧ ಕೇಳೆ ಗೋಪಿ ಗೋಪಾಲ ಮಾಡಿದ ಬಲು ।
ದಾಳಿಯ ಗೋಕುಲದಿ ॥ ಪ ॥

ತಾಳೆಲಾರೆವೆ ತವಕದಲಿ ಕಂದಗೆ ಬುದ್ಧಿ ।
ಹೇಳೆ ಕೃಷ್ಣನ ಕರೆದು ॥ ಅ.ಪ. ॥

ಸರಿರಾತ್ರಿಯೊಳು ಸರಸರನೆ ಮನೆಗೆ ಬಂದು ।
ಸುರಿದು ಪಾಲ್ಬೆಣ್ಣೆಗಳ ॥
ಉರೋಜಗಳಿಗೆ ಕರ ಸರಿಸಿ ಕಣ್ಗಳನು ।
ತೆರೆದು ನೋಡುವನೆ ನಮ್ಮ ॥ ೧ ॥

---

೧ ಝು (೫–೧೦) ಒಂದೇ ಪ್ರತಿಯಲ್ಲಿ ಇದೆ.

ಗಂಡನು ಮನೆಯೊಳಗಿರಲು ಬಂದು ಕೃಷ್ಣ ।
ಭಂಡು ಮಾತುಗಳ ಬಹು ॥
ತುಂಡತನದಲಾಡಿ ಉದ್ದಂಡ ಕಠಿಣಕಾಯ ।
ದುಂಡುಕುಚವ ಪಿಡಿದ ॥ ೨ ॥

.......ವದ ಮೇಲಿರಲು ತಾ ।
ಸೀರೆಯ ಸೆಳೆವ ನೋಡೆ ॥
ಆರಿವರೆಂದು ವಿಚಾರಿಸಿ ನೋಡಲು ।
ಮೋರೆಯ ಬಾಗಿದನೆ ॥ ೩ ॥

ಕೇರಿಯೊಳಗೆ ದಧಿಮಾರುತಿರಲು ಕೃಷ್ಣ ।
ಸಾರಿ ಬಂದು ಮೊಸರ ॥
ಸೂರೆಗೊಂಡು ಪರನಾರಿಯರ ನೆರೆದು ತಾ ।
ಘೋರರೂಪದಿ ಮೆರೆದ ॥ ೪ ॥

ಆಡಲೇತಕೆ ನಮ್ಮ ಬಾಗಿಲಂಗಳದೊಳು ।
ಬೇಡುವ ಜಲ ದೈನ್ಯದಿ ॥
ನೀಡುವೆ ಜಲ ಜಲಜಾಕ್ಷ ಬಾಬಾ ಎನೆ ।
ಮಾಡುವ ರತಿ ಎಂಬನೆ ॥ ೫ ॥

ಹುಡುಗನೆಂದು ಕೈಯ ಪಿಡಿಯ ಪೋಗಲು ನಮ್ಮ ।
ಉಡೆಮುಡಿ ಪಿಡಿದ ನೋಡೆ ॥
ಪಡೆವವಳಿಗೆ ಪೇಳುವೆ ನಡೆ ಎನೆ ಮುಚ್ಚ ।
ಕೊಡಲಿ ತೋರುವನೆ ಗೋಪಿ ॥ ೬ ॥

ಮಡದಿಯರೆಲ್ಲರು ಮಿಾಯುತಲಿರೆ ಮೈ ।
ಉಡುಗೆಯ ತೆಗೆದುಕೊಂಡು ॥
ಪಡಗರದಲಿ ಬೇಡಿಕೊಳ್ಳೆ ವಸ್ತ್ರಗಳನು ।
ಕೊಡದೆ ಅಡವಿಗೆ ನಡೆದ ॥ ೭ ॥

ಬೆಣ್ಣೆಯ ತಿಂದು ತಮ್ಮಣ್ಣಗೆ ತಾ ಕೊಟ್ಟು ।
ಚಿಣ್ಣರ ಬಡಿವ ನೋಡೆ ॥
ಬಣ್ಣಿಸಿ ನಮ್ಮ ಬಾಯಿಗೆ ಬೆಣ್ಣೆ ತೊಡೆಯುತ ।
ಬೆಣ್ಣೆಯ ತಿಂದಿರೆಂಬ ॥ ೮ ॥

ಏಣಲೋಚನೆ ಸರ್ಪವೇಣಿ ನಮ್ಮ ಮನೆ ।
ಓಣಿಯೊಳಗೆ ಪೋಗುತ ॥
ಕಾಣದಂತೆ ಚಕ್ರಪಾಣಿ ನಮ್ಮೊಳು ತನ್ನ ।
ತ್ರಾಣವ ತೋರಿದನೆ ॥ ೯ ॥

ಪದುಮನಾಭನು ಪುರದ ಚದುರಿಯರಿಗೆ ತಾನು ।
ಮದನಶಾಸ್ತ್ರವ ಪೇಳುತ ॥
ಮುದದೊಳಗಿರಲವರೊಡೆಯ ಬರಲು ಕೃಷ್ಣ ।
ಕುದುರೆಯನೇರಿದನೆ ॥ ೧೦ ॥

ಎಷ್ಟುಪದ್ರವ ಕೊಟ್ಟರು ಗೋಕುಲದೊಳು ।
ಬಿಟ್ಟವನಿರಲಾರೆವೆ ॥
ಸೃಷ್ಟಿಯೊಳಗೆ ಸರ್ವಾಭಿಷ್ಟದ ಪುರಂದರ- ।
ವಿಟ್ಠಲ ಸಲಹುವನೆ ॥ ೧೧ ॥

## ೭೪

ರಾಗ—ತೋಡಿ ತಾಳ—ಅಟ

೧ ಬೇಡವೆನ್ನೆ ನೀನು ಗೋಪಮ್ಮ ॥ ಪ ॥

ಕಾಡುವ ಕೃಷ್ಣಗೆ ಕರೆದು ಬುದ್ಧಿಯ ಹೇಳೆ ॥ ಅ.ಪ. ॥

---

೧ ಆ (II) ಪ್ರತಿಯಿಂದ ಆರಿಸಿದೆ.

ಎಣ್ಣೆ ಮಂಡೆಯಲಿ ಬಣ್ಣದ ಬಚ್ಚಲೊಳಗಿರೆ ।
ಬಣ್ಣಿಸಿ ಆಟಕಾಳಿ ಹಚ್ಚುವೆನೆನುತಲಿ ॥
ಬೆನ್ನು ಒರಸಲು ಬಂದ—ಬೆದರೇಳ್ವರ ।
ಮುನ್ನ ತಕ್ಕೈಸಿಕೊಂಡ—ಗೋಪಮ್ಮ ನಿನ್ನ ।
ಚಿಣ್ಣ ಸಿರಿಗೇಡಿಯು ಎನ್ನ ನಾಚಿಕೆಗೊಂಡ ॥ ೧ ॥

ನೆಲುವಿಗೆ ಹಾಲ ಏರಿಸುವಳ ಕೈವಿಡಿದು ।
ಕಿಲಿಕಿಲಿ ಕಿವಿಮಾತ ಹೇಳುವೆ ಎನುತಲಿ ॥
ಕಲೆಯಸಿಕ್ಕಿದ ಗಲ್ಲಕೆ—ಮೇಲ್ಮಲಕಿನ ।
ತಳಕಿಕ್ಕಿ ಕೆಡಹಲಿಕೆ—ಕೆಳಗೆ ಬಿದ್ದು ।
ಬಳಲಿ ಬಂದೆವೆ ನಿಮ್ಮ ಬಳಿಗೆ ಗೋಪಮ್ಮ ॥ ೨ ॥

ಮನೆಮನೆಯೊಳು ದಂಪತಿಗಳಿದ್ದ ಮಂಚ- ।
ವನು ನಡುಬೀದಿಯೊಳ್ ಹಾಕಿ ಕೆಲೆವನೆ ಕೃಷ್ಣ ॥
ಮನುಮಥನಯ್ಯ ಕಾಣೆ—ಈತನು ಮಹಾ ।
ಮುನಿಗಳ ಮನಕೆ ನಿಲುಕದಿಪ್ಪಗೆ—ಮೂಲೋಕಕೆ ।
ಘನಮಹಿಮ ನಮ್ಮ ಪುರಂದರವಿಠಲಗೆ ॥ ೩ ॥

೭೫

ರಾಗ—ಕೇದಾರಗೌಳ ತಾಳ—ಛಾಪು

[1] ದೂರು ಮಾಡುವರೇನೆ ರಂಗಯ್ಯನ ॥ ಪ ॥

ದೂರು ಮಾಡುವರೇನೆ । ಚೋರನೆಂದೆವನನ್ನು ।
ಮೂರು ಲೋಕವನು ಕಾ । ಪಾಡುವ ರಂಗಯ್ಯನ ॥ ೧ ॥

---

೧ ಅ (೧೧) ಪ್ರತಿಯಿಂದ ಆರಿಸಿಕೊಂಡಿದೆ.

ನಂದಗೋಕುಲದಲ್ಲಿ । ಕಂದರೊಡಗೂಡಿ ಆ- ।
ನಂದದಿಂದಲಾಡುವ । ಕಂದ ರಂಗಯ್ಯನ || ೨ ||

ಗೊಲ್ಲರ ಮನೆಯಲ್ಲಿ । ಕಳ್ಳತನದಲಿ ಪೊಕ್ಕು ।
ಗಲ್ಲವನು ಪಿಡಿದು ಮು । ದ್ದಿಡುವ ರಂಗಯ್ಯನೆಂದು || ೩ ||

ಕಾಮಾಂಧಕಾರದಲಿ । ಕಳವಳಗೊಳಿಸಿದ ।
ಶ್ಯಾಮಸುಂದರ ರಂಗ । ಸೋಲಿಸಿ ಪೋದನೆಂದು || ೪ ||

ಮಂಗಲಮೂರುತಿ ಪು । ರಂದರವಿಠಲನು ।
ರಂಗಮಂಚದಲಿ ನೆರೆದು । ಹಿಂಗಿ ಪೋದನೆಂದು || ೫ ||

## ೭೬

**ರಾಗ—ಆರಭಿ** **ತಾಳ—ಆದಿ**

ಸಾಕು ಮಾಡಿರವ್ವ ರಂಗನ ।
ಏಕೆ ದೂರುವಿರೆ? || ಪ ||

ಬೆಟ್ಟು ಬಾಯೊಳಗಿಟ್ಟರೆ ರಂಗ—ಕಚ್ಚಲರಿಯನೆ ।
ಕಟ್ಟಿರುವೆಯನು ಕಂಡರೆ ಬವ್ವೆಂದು—ಚಿಟ್ಟನೆ ಚೀರುವನೆ ||
ರಟ್ಟೆಯ ಹಿಡಿದು ನಡಸಲು ರಂಗ—ದಟ್ಟಡಿ ಇಕ್ಕುವನೆ ।
ಭ್ರಷ್ಟ ಮಾತುಗಳನೆಷ್ಟೋ ಕಲ್ಪಿಸಿ ।
ಪಟ್ಟುಪಟ್ಟಿಗೆ ರಟ್ಟು ಮಾಡುವುದ || ೧ ||

ಅರಿಯದಂತೆ ನೊರೆಹಾಲನು ಕುಡಿವನೆ—ಕರಕರೆ ಮಾಡುವನೆ ।
ಇರಲು ಮನೆಯೊಳಗೆ ಬರುತ ನಿಮ್ಮ ಮನೆ—ವೊಸರನು
ಸುರಿಯುವನೆ ||

---

೧ ಶ್ರೀ ಪ್ರತಿಯೊಂದರಲ್ಲಿಯೆ ಸಿಕ್ಕುತ್ತಿದೆ.

....................................................

ಸರಸಿಜಾಕ್ಷಿಯರೆ ಪರಿಪರಿಯಿಂದಲಿ ।
ಹರಲಿ ಮಾಡುವುದಿದು ತರವೇನಮ್ಮ ॥ ೨ ॥

ಚಿಕ್ಕ ಚಿಕ್ಕ ಗೋವಕ್ಕಳ ಕೂಡ ಚೆಂಡನಾಡುವಾಗ ।
................................................
................................................
ಸಿಕ್ಕಿತೆನುತ ಬಹು ಚಕ್ಕಂದಾಡುತ ।
ಗಕ್ಕನೆ ಹೋಗಿ ಕೈಯಿಕ್ಕಿ ತೆಗೆದನೆ ! ॥ ೩ ॥

ಮಾಲೆಗಂಬದೋಪಾದಿಯಲಿ ನೀವು ಬಹಳ ಬೆಳೆದಿರೀಗ ।
ನೀಲಕುಂತಳೆಯೆ ದಧಿಶೋಧಿಸಿ ಓಲಾಡುತ ಕಡೆವಾಗ ॥
ಬಾಲಕೃಷ್ಣನಿಗೆ ಜೋಲುವ ಕುಚಗಳು ।
ನಿಲುಕುವ ಬಗೆ ಹೇಗೆ ? ॥
ಖೂಳ ಸೆಟವಿಯರು ಕಾಳವಾಗಿಹರು ।
ಕೇಳಿ ಕೇಳಿ ಬೇಸತ್ತಿಹೆನಮ್ಮಾ ॥ ೪ ॥

ಫುಲ್ಲನಾಭನಿವ ಒಲ್ಲದನಾದರೆ ಎಲ್ಲಿ ಒಯ್ದಿಡಬೇಕೆ ? ।
ಖುಲ್ಲತನದಿ ನೀವ್ ನಿಲ್ಲಗೊಡದಿಹಿರಿ ಗುಲ್ಲುತನವು ಸಾಕೆ ॥
................................................
ಸಲ್ಲದು ಈ ನುಡಿ ಪುರಂದರವಿಠಲಗೆ ।
ಹಲ್ಲೊಳಗಾತನ ಇಟ್ಟಿರಬೇಡಿ ! ॥ ೫ ॥

## ೭೭

ರಾಗ—ಬಿಲಹರಿ ತಾಳ—ಅಟ

೧ ಏನ ಮಾಡಲಿ ಮಗನೆ ಏಕೆ ಬೆಳಗಾಯಿತು ।
ಮಾನಿನಿಯರು ಬಂದು ಮಾನ ಕಳೆಯುವರು ॥ ಪ ॥

---

೧ ಇ-ಎ ಪ್ರತಿಗಳಿಂದ ಆರಿಸಿಕೊಂಡಿವೆ.

ಹಾಲು, ಮೊಸರು, ಬೆಣ್ಣೆ ಕದ್ದನೆಂತೆಂಬುವರು ।
ಮೇಲಿಟ್ಟ ಕೆನೆಯನು ಮೆದ್ದನೆಂಬುವರು ॥
ಬಾಲರನೆಲ್ಲರ ಬಡಿದನೆಂಬರು ಎಂಥ ।
ಕಾಳು ಹೆಂಗುಸು ಇವನ ಹಡೆದಳೆಂಬುವರೊ ॥ ೧ ॥

ಕಟ್ಟಿದ್ದ ಕರುಗಳ ಬಿಟ್ಟನೆಂತೆಂಬರೊ ।
ಮೆಟ್ಟಿ ಸರ್ಪನ ಮೇಲೆ ತುಳಿದನೆಂಬುವರೊ ॥
ಪುಟ್ಟ ಬಾಲೆಯರ ಮೋಹಿಸಿದನೆಂಬರೊ ಎಂಥ ।
ಕೆಟ್ಟ ಹೆಂಗುಸು ಇವನ ಹಡೆದಳೆಂಬುವರೊ ॥ ೨ ॥

ಗಂಗಾಜನಕ ನಿನ್ನ ಜಾರನೆಂತೆಂಬರೊ ।
ಶೃಂಗಾರಮುಖ ನಿನ್ನ ಬರಿದೆ ದೂರುವರೊ ॥
ಮಂಗಳಮಹಿಮ ಶ್ರೀಪುರಂದರವಿಟ್ಠಲ ।
ಹಿಂಗದೆ ಎಮ್ಮನು ಸಲಹೆಂತೆಂಬುವರೊ ! ॥ ೩ ॥

# ೫. ಗೋಪಿಕಾಪ್ರೇಮಲೀಲೆ

## ೭೮

### ಸುಳಾದಿ

ಧ್ರುವತಾಳ

೧ ಹಸುಗಳ ಕರೆವ ಧ್ವನಿ ಕರುಗಳ ಪಿಡಿದು ಬಿಡುವ ಧ್ವನಿ ।
ರಶನೆ-ಕಂಕಣಗಳನಿಟ್ಟ ಯಶೋದೆ ಮೊಸರ ಕಡೆವ ಧ್ವನಿ ।
ಪಯೋಬ್ಧಿಶಯನನ [ ಒಸೆದು ] ಪಾಡುವ ಧ್ವನಿ ।

೧ ಜ ೨ ಪ್ರತಿಯೊಂದರಲ್ಲಿಯೆ ಸಿಕ್ಕಿದೆ.

ಸೆಳೆಮಂಚದ ಮೇಲೆ ಯೋಗನಿದ್ರೆಯೊಳಿಪ್ಪ ।
ಕುಸುಮಾಕ್ಷನು ಉಪ್ಪವಡಿಸಲು ನ್ಯೈಮುರಿದೆದ್ದು ।
ಬಂದು ಗೋಪಿಯ ನಿರಿಯ ಪಿಡಿದುಕೊಂಡು ।
ಮೊಲೆಯ ಕೊಡು ಹಸಿದೆನೆಂದೆಂಬ ಹರಿಯನೆತ್ತಿಕೊಂಡು ।
ತೊಡೆಯ ಮೇಲಿಟ್ಟು ಹನಿವ ಮೊಲೆಯೂಡಲು ।
ಆಡುವ ಕೃಷ್ಣರಾಯ ಬಿಡದೆ ಭಕುತಜನರ ಸಲಹುವ ।
ಸುಕುಮಾರಕ ಪುರಂದರವಿಠಲ ॥ ೧ ॥

ಮಟ್ಟೆತಾಳ

ಪೊಂಬಣ್ಣದಂಬರವನುಟ್ಟು ಕಂಬಳಿಯ ಹೊದ್ದಿರೆ ।
ಅಂಬುಜಸಂಭವ ಆಗಮ ಉಚ್ಚರಿಸೆ ।
ಕೊಂಬು-ಕೊಳಲು-ತುತ್ತುರಿಗಳು ಊದುತಿರೆ ।
ಅಂಬುಜಸಂಭವ ಎಂಬವನರಿಯೆ ನೀನು ।
ಪುರಂದರವಿಠಲ ॥ ೨ ॥

ಅಟ

ಕೋಗಿಲೆಯಂತೆ ಕೂಗುವೆಯೊಮ್ಮೆ ।
ಗಿಳಿಯಂತೆ ಮಾತನಾಡುವೆಯೊಮ್ಮೆ ।
ತುಂಬಿಯಂತೆ ಪಾಡುವೆಯೊಮ್ಮೆ ।
ನವಿಲಿನಂತೆ ನಲಿದಾಡುವೆಯೊಮ್ಮೆ ।
ಒಮ್ಮೆ ಕೊಕ್ಕರನಂತೆ ಕೊಕ್ಕೆ ಒಮ್ಮೆ ಗೂಳಿಯಂತೆ ಗುಟುರಿ ।
ಒಮ್ಮೆ ಗೋವಳರಂತೆ ಗೋಲಿಯಾಡುವೆ ।
ಆವ ಲೀಲೆಯೊ ಪುರಂದರವಿಠಲ ॥ ೩ ॥

ರೂಪಕ

ಕಂಡೆವು ನಿನ್ನೆಲಿ ಕೃಷ್ಣ ನೊಸಲ ಬಿಸಿಲಿಗೆ ।
ಬೆಣ್ಣೆಯ ಗುಂಡಿಗೆವರೆಗೆ ಒಲುಮೆಯಿಂದ ।

ಕುಶಲವಾಡಿ ಮಿಾಸಲಳಿಪೆ ಕಾಂಬಕಾಂಬವರಿಗೆ ಬೀರುವೆ ।
ಅಂಜುವೆವೆ ಪಾಂಡುರಂಗ ಪುರಂದರವಿಟ್ಠಲ ।
ದೇವತೆಗಳ ಮಾನಿ ॥ ೪ ॥

ಝಂಪೆತಾಳ

ವಿತ್ತದಹಂಕಾರ-ಮಮಕಾರದಿಂದ ।
ಸುತ್ತಿ ಸುತ್ತಿ ಸುಣ್ಣವಾಗಿರೆ ಕಂಡು ।
ಇತ್ತ ಬಾ ಇತ್ತ ಬಾ ಎಂದು ।
ಉತ್ತರಿಸುವೆ ಸಂಸಾರ ಸಾಗರವ ।
ಭೃತ್ಯನಪ್ಪೆ ಪುರಂದರವಿಟ್ಠಲ ।
ಇತ್ತ ಬಾ— ॥ ೫ ॥

ಆದಿತಾಳ

ಆವ ತೀರಥವಲಿ ಮುಳುಗಿದೆನೊ ನಾ- ।
ನಾವ ಕ್ಷೇತುರಗಳ ಮೆಟ್ಟಿದೆನೊ ನಾ- ।
ನಾವ ಕ್ರತುವ ನೆರೆ ಮಾಡಿದೆನೊ ನಾ- ।
ನಾವ ದೇವತೆಗಳ ಭಜಿಸಿದೆನೊ ।
ದೇವ ಪುರಂದರವಿಠಲನ ।
ಪಾವನಮೂರ್ತಿಯ ಕಂಡೆ ನಾನು ॥ ೬ ॥

ಏಕತಾಳ

ಉಪಾಧಿಯಿಂದ ನಿನ್ನ ಭಜಿಸುವೆ ನಿ- ।
ರುಪಾಧಿ ನೀನು ಶಿವನನಾನರಿಯದ ಕಾರಣ ।
ಅಪಾರಮಹಿಮನೆ ಉಪಾಧಿಯಳಿದು ನಿ- ।
ರುಪಾಧಿಸೆ ಶಿವನ ಭಜಿಪಂತೆ ಮಾಡಯ್ಯ ।
ಅಪವರ್ಗವಿಸದನೀಯೆ ಜಗದೇಕಪಾಲ
ಪುರಂದರವಿಟ್ಠಲರಾಯ ॥ ೭ ॥

ಜತೆ

ಎನ್ನ ತನುಮನಧನವಿಂದು ಪಾವನವೈಯ ।
ನಿನ್ನ ಸಾರಿದೆ ಪುರಂದರವಿಠಲ ॥

೭೯

ರಾಗ—ಆರಭಿ ತಾಳ—ಅಟ

೧ ಚಂದ್ರಗಾವಿಯನುಟ್ಟು ದುಂಡುಮುತ್ತನೆ ಕಟ್ಟಿ ।
ಪೆಂಡೆಯುರುಳಿಯನಿಟ್ಟು ॥
ಕೆಂದಾವಿನ ಹಾಲ ಹರವಿಯ ಹೊತ್ತುಕೊಂಡು ।
ಬಂದಾಳು ಬೀದಿಗಾಕೆ ॥ ಪ ॥

ಹಾಲು ಮಾರುವ ಧ್ವನಿ ಲಾಲಿಸಿ ರಂಗಯ್ಯ ।
ಮೇಲಿನ ಕೇರಿಯಲಿ ॥
ನಾಳೆ ನಮ್ಮನೆಯಲಿ ವೀಳೆ-ಪ್ರಸ್ತಗಳುಂಟು ।
ಹಾಲು ನಿಲ್ಲಿಸೆಂದನು ॥ ೧ ॥

ಕೊಂಡವನು ನೀನಲ್ಲ ಡಂಭಕರ ಮಾತೇಕೊ ।
ಗಂಡನುಳ್ಳವಳ ಕೂಡ ॥
ಮಂಡಲವಾಳುವ ಅರಸಿನ ಮುಂದೆ ಹೇಳಿ ।
ದಂಡವ ತೆರಸುವೆಸೊ ॥ ೨ ॥

ಅಡವಿಹಂಬುಗಳಿಗೆ ಹೆಡಿಗೆಸುಂಕವು ಇಲ್ಲ ।
ತಡೆವವ ನೀನಾರೊ? ॥
ನಡೆ ಊರ ಮುಂದಕೆ ತಳವಾರರೈದಾರೆ ।
ಗಡಸೆ ಪೇಳುವೆನೆಂದಳು ॥ ೩ ॥

೨ ಶ್ರೀ ಪ್ರತಿಯಿಂದ ಆರಿಸಿದೆ.

ಬಲ್ಲೆ ಬಲ್ಲೆನೆ ನಿನ್ನ ಬಗೆಯ ಮಾತುಗಳೆಲ್ಲ ।
ಎಲ್ಲಿಹ ತಳವಾರನೆ ॥
ಅಲ್ಲದಿದ್ದರೆ ಬಂದು ವೀಳ್ಯವ ತಕ್ಕೊಂಡು ।
ಅಲ್ಲಲ್ಲಿ ದೂರದಿರೆ ॥ ೪ ॥

ಕೋಲು ಕೈಯಲಿ ಪಣೆಯಲಿ ಸಿರಿನಾಮವು ।
ಆಲದ ಮರದಡಿಯೆ ॥
ಕಾಲ ಮೊದಲು ಹಾಲ ಮಾರಿದ ಸುಂಕಕೆ ।
ನಿಲ್ಲೆಂದು ಸೆರಗ ಪಿಡಿದ ॥ ೫ ॥

ಅಪ್ಪ ಸೆರಗ ಬಿಡೊ, ಅಣ್ಣ ಸೆರಗ ಬಿಡೊ ।
ಅಪ್ಪಯ್ಯ ಸೆರಗ ಬಿಡೊ ॥
ಅಪ್ಪನು ನಾನಲ್ಲ, ಅಣ್ಣನು ಅಲ್ಲ ನಿ- ।
ಮ್ಮಪ್ಪನ ಅಳಿಯ ಕಾಣೆ ॥ ೬ ॥

ಮಾವ ಸೆರಗ ಬಿಡೊ, ಭಾವ ಸೆರಗ ಬಿಡೊ ।
ಭಾವಯ್ಯ ಸೆರಗ ಬಿಡೊ ॥
ಮಾವನು ನಾನಲ್ಲ, ಭಾವನು ನಾನಲ್ಲ ।
ಮಾವನ ಮಗನು ಕಾಣೆ ॥ ೭ ॥

ಅಣ್ಣ ಸೆರಗ ಬಿಡೊ, ತಮ್ಮ ಸೆರಗ ಬಿಡೊ ।
ಅಣ್ಣಯ್ಯ ಸೆರಗ ಬಿಡೊ ॥
ಅಣ್ಣನು ನಾನಲ್ಲ, ತಮ್ಮನು ಅಲ್ಲ ನಿ- ।
ಮ್ಮಣ್ಣನ ಭಾವ ಕಾಣೆ ॥ ೮ ॥

ಕಂದ ಸೆರಗ ಬಿಡೊ, ತಂದೆ ಸೆರಗ ಬಿಡೊ ।
ಕಂದಯ್ಯ ಸೆರಗ ಬಿಡೊ ॥
ಕಂದನು ನಾನಲ್ಲ, ತಂದೆಯು ನಾನಲ್ಲ ।
ಕಂದನ ತಂದೆ ಕಾಣೆ ॥ ೯ ॥

ನೆತ್ತಿ ಮೇಲಿನ ಕೊಡ ಎತ್ತಿ ಈಡಾಡುತ ।
ಎತ್ತಿಕೊಂಡಳು ಕೃಷ್ಣನ ॥
ಭಕ್ತರ ಸಲಹುವ ಪುರಂದರವಿಟ್ಠಲ ।
ವತ್ಸ ವೆಂಕಟರಾಯನ ॥ ೧೦ ॥

**೪೦**

**ರಾಗ—ಮೋಹನ** **ತಾಳ—ಅಟ**

೧ ಮಂದಗಮನೆ, ಇವನಾರೆ ಪೇಳಮ್ಮ ।
ಮಂದರಧರ ಗೋವಿಂದ ಕಾಣಮ್ಮ ॥ ಪ ॥

ಕೆಂದಳಿರ ನಖ ಶಶಿಬಿಂಬ ಪಾದಪದ್ಮ ।
ಅಂದುಗೆಯಿಟ್ಟವನಾರು ಪೇಳಮ್ಮ ॥
ಅಂದು ಕಾಳಿಂಗನ ಪೆಡೆಯ ತುಳಿದ ದಿಟ್ಟ ।
ನಂದನ ಕಂದ ಮುಕುಂದ ಕಾಣಮ್ಮ ॥ ೧ ॥

ಉಡುಗೆ ಪೀತಾಂಬರ ನಡುವಿಗೆ ಉಡುದಾರ ।
ಕಡಗ-ಕಂಕಣವಿಟ್ಟವನಾರಮ್ಮ ॥
ಮಡದಿ ಕೇಳ್ ಸಕಲಲೋಕಂಗಳ ಕುಕ್ಷಿಯೊಳ್ ।
ಒಡನೆ ತೋರಿದ ಜಗದೊಡೆಯ ಕಾಣಮ್ಮ ॥ ೨ ॥

ನೀರದ ನೀಲದಂತೆಸೆವ ವಕ್ಷದಿ ಕೇ- ।
ಯೂರ-ಹಾರಗಳನಿಟ್ಟವನಾರಮ್ಮ ॥
ನೀರೆ ಕೇಳು ನಿರ್ಜರರಾದವರಿಗೆ ।
ಪ್ರೇರಿಸಿ ಫಲವಿತ್ತುದಾರಿ ಕಾಣಮ್ಮ ॥ ೩ ॥

---

೧ ೬ ಪ್ರತಿಯಿಂದ ಆರಿಸಿಕೊಂಡಿದೆ.

ಶಂಖ-ಚಕ್ರವ, ಗದೆ–ಪದ್ಮ ಕೈಯೊಳಗಿಟ್ಟ- |
ಲಂಕೃತನಹನೀತನಾರಮ್ಮ ||
ಪಂಕಜಮುಖಿ ಶ್ರೀಭೂದೇವಿಯರರಸನು |
ಶಂಕೆ ಇಲ್ಲದೆ ಗೋಪೀತನಯ ಕಾಣಮ್ಮ || ೪ ||

ಕಂಬುಕಂಧರ ಕರ್ಣಾಲಂಬಿತ ಕುಂಡಲ |
ಅಂಬುಜಮುಖದವನಾರೆ ಪೇಳಮ್ಮ ||
ರಂಭೆ ಕೇಳೀತ ಪುರಂದರವಿಟ್ಠಲ |
ನಂಬಿದ ಭಕ್ತಕುಟುಂಬಿ ಕೇಳಮ್ಮ || ೫ ||

೭೧

ರಾಗ—ಮಾರವಾ ತಾಳ—ಅಟ

[೧] ನೋಡುವುದೆ ಕಣ್ಣು, ಕೇಳುವುದೆ ಕಿವಿ |
ಪಾಡುವುದೇ ವದನ || ಪ ||

ಗಾಡಿಕಾರ ಶ್ರೀವೇಣುಗೋಪಾಲನ |
ಕೂಡಿಕೊಂಡಾಡುವ ಸುಖದ ಸೊಬಗನು || ಅ.ಪ. ||

ಎಳದುಳಸಿಯ ವನಮಾಲೆಯಿಂದೊಪ್ಪುವ |
ಎಳೆಯ ಗೋವಳರೊಡನಾಡುವ ||
ತಳಿತ ತರುವಿನ ನೆಳಲಲ್ಲಿ ನಲಿವನ |
ನಳಿನನಾಭನ ಮುದ್ದು ನಗೆಯ ಸೊಬಗನು || ೧ ||

---

೧ ಮ ಪ್ರತಿಯಿಂದ ತೆಗೆದುಕೊಂಡಿದೆ.
ಅ ( ಬಿಡಿ ೩ ) ೧–೨–೫ ನುಡಿಗಳಿವೆ.



ವೇಣುಗೋಪಾಲ ( ಬೇಲೂರು )

ಅರಸಂಚೆಯೊಲು ಕುಣಿವ ನವಿಲಂತೆ ನಲಿಯುವ ।
ಮರಿಗೋಗಿಲೆಯಂತೆ ಕೂಗುವನ ॥
ಎರಳೆಯಂತೆ ಜಿಗಿಜಿಗಿದಾಡುವ ತುಂಬಿ ।
ಶಿರವ ತಗ್ಗಿಸುವಂತೆ ಝೇಂಕರಿಸುವನ ॥ ೨ ॥

ಮೊಲ್ಲೆಮಲ್ಲಿಗೆ ಜಾಜಿ ಪೂಮಾಲೆಗಳ ಧರಿಸಿ ।
ಚೆಲ್ವೆಯರಿಗೆ ಮುಡಿಸುವನ ॥
ಜಲಕೇಳಿ ವನಕೇಳಿ ಮೊದಲಾದಾಟಗಳಿಂದ ।
ಚೆಲ್ಲೆಗಂಗಳ ಮುದ್ದು ಫುಲ್ಲನಯನನ ॥ ೩ ॥

ಪೊಂಗೊಳಲೂದುತ ಮೃಗಖಗ ಜಾತಿಯ ।
ಸಂಗಡಿಸುತಲಿಪ್ಪನ ॥
ಅಂಗವ ಮರೆತು ನೂರಂಗನೆಯರಲಿ ಬೆಳು- ।
ದಿಂಗಳೊಳಗೆ ಕುಣಿದಾಡುವ ದೇವನ ॥ ೪ ॥

ಮುರುಕಿ ಕುಬ್ಜೆಯ ಡೊಂಕ ತಿದ್ದಿ ರೂಪಿಯ ಮಾಡಿ ।
ಸೆರಗಪಿಡಿಸಿಕೊಂಬನ ॥
ಕರುಣಾಕರ ಶ್ರೀಪುರಂದರವಿಟ್ಠಲ ।
ಶರಣಾಗತ ರಕ್ಷಕ ರಮೆಯರಸನ ॥ ೫ ॥

## ೮೨

ರಾಗ—ಮೋಹನ ತಾಳ—ಅಟ

೧ ವೇಣುನಾದ ಬಾರೊ, ವೆಂಕಟರಮಣನೆ ಬಾರೊ ।
ಬಾಣನ ಭಂಜಿಸಿದಂಥ ಭಾವಜನಯ್ಯನೆ ಬಾರೊ ॥ ಪ ॥

೧ ಖ (ಚ) ಪ್ರತಿಯಿಂದ ತೆಗೆದುಕೊಂಡಿದೆ.

ಪೂತನಿಯ ಮೊಲೆಯುಂಡ ನವ- ।
ನೀತ ಚೋರನೆ ಬಾರೊ ॥
ದೈತ್ಯರಾವಣನ ಸಂಹರಿಸಿದ ।
ಸೀತಾನಾಯಕ ಬಾರೊ ॥ ೧ ॥

ಹಲ್ಲು ಮುರಿದು ಮಲ್ಲರ ಗೆದ್ದ ।
ಫುಲ್ಲನಾಭನೆ ಬಾರೊ ॥
ಗೊಲ್ಲತಿಯರೊಡನೆ ನಲಿವ ।
ಚೆಲ್ವ ಮೂರುತಿ ಬಾರೊ ॥ ೨ ॥

ಮಂದರವನೆತ್ತಿದಂಥ ।
ಇಂದಿರಾರಮಣನೆ ಬಾರೊ ॥
ಕುಂದದೆ ಗೋವುಗಳ ಕಾಯ್ದ ।
ನಂದನಂದನನೆ ಬಾರೊ ॥ ೩ ॥

ನಾರಿಯರ ಮನೆಗೆ ಪೋಪ ।
ವಾರಿಜಾಕ್ಷನೆ ಬಾರೊ ॥
ಈರೇಳು ಭುವನವ ಕಾಯ್ವ ।
ಮಾರನಯ್ಯನೆ ಬಾರೊ ॥ ೪ ॥

ಶೇಷಶಯನ ಮೂರುತಿಯಾದ ।
ವಾಸುದೇವನೆ ಬಾರೊ ॥
ದಾಸರೊಳು ವಾಸವಾದ ।
ಶ್ರೀಶ ಪುರಂದರವಿಠಲ ಬಾರೊ ॥ ೫ ॥

೮೩

ರಾಗ—ಶಂಕರಾಭರಣ  ತಾಳ—ಅಟ

೧ ಮನಸು ನಿನ್ನ ಮೇಲೆ ಬಹಳ—ಕಾಲ ।
ಅನುಕೂಲಿಸದೊ ಗೋಪಾಲ ‖ ಪ ‖

ನಿನ ಕೂಡೆ ಈಗ ಕೂಡುವೆನೆಂದರೆ ಮನೆ- ।
ಜನರೆಲ್ಲರು ಕೂಡಲೀಸರೊ ಕೃಷ್ಣ ‖ ಅ. ಪ ‖

ಗಂಡನೆಂಬವನು ಉದ್ದಂಡ—ಎನ್ನ ।
ಕಂಡರೆ ಸೇರನು ಭಾವ ಪ್ರಚಂಡ ‖
ಭಂಡೆ ಅತ್ತೆಯು ಲಂಡೆ ಅತ್ತಿಗೆ ಕೇಳೊ ।
ಕಂಡರಿಬ್ಬರನು ದಂಡಿಸುವರೊ ರಂಗ ‖ ೧ ‖

ನೆರೆಹೊರೆಯುವರೆನ್ನನೆಲ್ಲ—ವೈಯ ।
ನೆರಳ ಕಂಡರೆ ಸೇರರಲ್ಲ ‖
ಸರಿಸಖಿಯರು ಎಲ್ಲ ಸುಮ್ಮನಿರುವರಲ್ಲ ।
ಮರೆಮಾತನಾಡಲು ವೇಳೆ ಕೂಡದೊ ರಂಗ ‖ ೨ ‖

ಮದುವೆ ಮಾಡುವರೊ ಮನೆಯೊಳು—ನಾಳೆ ।
ಆದರ ಸಂಪಣೆಯ ಹೊಂಚಿನೊಳು ‖
ಮುದದಿಂದ ಕೂಡುವೆನಾವ ಪರಿಯೊಳು ।
ಮದನತಂತ್ರದಿಂದ ಪುರಂದರವಿಠಲ ‖ ೩ ‖

---

೧ ತ ಪ್ರತಿಯಿಂದ ತೆಗೆದುಕೊಂಡಿದೆ.

## ೮೪

ರಾಗ—ಕಲ್ಯಾಣಿ ತಾಳ—ಅಟ

೧ ಸದ್ದು ಮಾಡಲು ಬೇಡವೊ—ನಿನ ಕಾಲಿಗೆ ।
ಬಿದ್ದು ನಾ ಬೇಡಿಕೊಂಬೆ ॥ ಪ ॥

ನಿದ್ದೆಗೆಯ್ಯುವರೆಲ್ಲ ಎದ್ದರೆ ನೀನು ಬಂ- ।
ದಿದ್ದದ್ದು ಕಂಡರೇನೆಂಬುವರೊ ರಂಗ ॥ ಅ. ಪ ॥

ಬಳೆ ಘಲ್ಲುಕೆನ್ನದೇನೊ—ಕೈಯ ಪಿಡಿದು ।
ಎಳೆಯದಿರೊ ಸುಮ್ಮನೆ ॥
ಮೊಲೆಗಳ ಮೇಲಿನ ಸೆರಗನೆಳೆಯಲು ಕೊ- ।
ರಳ ಪದಕಂಗಳು ಧ್ವನಿಗೆಯ್ಯುವವೊ ರಂಗ ॥ ೧ ॥

ನಿರುಗೆಯ ಪಿಡಿಯದಿರೊ—ಕಾಂಚಿಯ ದಾಮ ।
ಕಿರುಗಂಟೆ ಧ್ವನಿಗೆಯ್ಯದೆ? ॥
ಕಿರುದುಟಿಗಳ ನೀನು ಸವಿದು ಚಪ್ಪರಿಸಲು ।
ತರವಲ್ಲ ಗಂಡ ಮತ್ಸರವ ತಾಳುವನಲ್ಲ ॥ ೨ ॥

ನಾಡ ಮಾತುಗಳೇತಕೊ—ಸಂಗೀತವ ।
ಪಾಡುವ ಸಮಯವೇನೊ ॥
ಗಾಡಿಕಾರ ಶ್ರೀಪುರಂದರವಿಠಲನೆ ।
ಪಾಡುಪಂಥಗಳೆ ಒಡಗೂಡುವ ಸಮಯದಿ ॥ ೩ ॥

---

೧ ಓ ಪ್ರತಿಯಿಂದ ತೆಗೆದುಕೊಂಡಿದೆ.

೮೫

ರಾಗ—ಸಾವೇರಿ ತಾಳ—ಅಟ

೧ ಬಾರೊ ಮುನಿಸೇತಕೆ ಭಾವಜನಯ್ಯ ॥ ಪ ॥

ಮಾವನಳಿಯನೆ ಬಾರೊ ಭಾವತನಯನೆ ಬಾರೊ ।
ಮಾವನ ಮಡದಿಯ ಮಗಳ ಸೊಸೆಯ ಗಂಡ ॥ ೧ ॥

ಅತ್ತಿಗೆ ಮೈದುನನೆ ಬಾರೊ ಅತ್ತಿಗೆಯ ಮಗಳ ಗಂಡ ।
ಮತ್ತೆ ಮೇಲೆ ಅತ್ತಿಗೆಯ ಪುತ್ರಿಯ ಮುದ್ದಾಡುತ ॥ ೨ ॥

ಅಂಬುಜನಯನನೆ ಬಾರೊ ಆದಿಮೂಲನೆ ಬಾರೊ ।
ಕಂಬದಿಂದೊಡೆದು ಬಂದ ಪುರಂದರವಿಠಲಯ್ಯ ॥ ೩ ॥

# ೬. ಕಾಲಿಯಮರ್ದನಲೀಲೆ

೮೬

ರಾಗ—ಪೂರ್ವಿ ತಾಳ—ಅಟ

೨ ಚೆಂಡನಾಡುತ ಬಂದ ಪುಂಡ ಕೃಷ್ಣನು ತನ್ನ ।
ಹಿಂಡು ಗೋಪಾಲಕರ ಕೊಂಡು ಯಮುನೆಯ ತಡಿಗೆ ॥ ಪ ॥

ಓರೆ ತುರುಬಿನ ಕಟ್ಟಿ ಗೀರುನಾಮವನಿಟ್ಟು ।
ಹಾರ ಕಂಕಣ ತೋಳಬಂದಿ ಘುಂಗುರ ಘನ- ।

---

೧ ಇ ಪ್ರತಿಯೊಂದರಲ್ಲಿಯೆ ಸಿಕ್ಕಿದೆ.
೨ ಗ ( [illegible] ) ಪ್ರತಿಯೊಂದರಲ್ಲಿಯೆ ಸಿಕ್ಕಿದೆ.

ಸಾರ ಕುಂಕುಮ ಕೇಸರಿಗಂಧ ಚರ್ಚಿಸಿ ।
ಸೇರಿಸುತ ನಡುವಿಗೆ ಕಾಸಿದಟ್ಟೆಯನುಟ್ಟು ।
ಹಾರಾಡುತಲಿ ಬಂದ—ತೊಡರಗಾಲ ।
ತೋರ ಚಿನ್ಮಣಿಗಳಿಂದ—ಮುತ್ತಿನ ಚೆಂಡು ।
ಧಾರಿಣಿಗೆ ಪುಟಿಸಿ ನಿಂದ—ವಜ್ರದ ಖಣಿ ।
ತೋರಿ ಗೆಳೆಯರ ಕೂಡ ಬಂದರಾ ಮನೆಯಿಂದ ॥ ೧ ॥

ಕೊಂಡಾಲ ತಿಮ್ಮನು ಚೆಂಡನೆ ಹೊಡೆದನು ।
ಮಿಂಡೆಯರ ಮೊಲೆಗಾಗಿ ಹಾರಿ ಹರಿದು ಬೀಳೆ ।
ಹಿಂಡುನಾರಿಯರೆಲ್ಲ ಸುತ್ತಿಕೊಂಡಿರೆ ಅವರ ।
ಮಂಡೆಗೆ ತಗುಲಿಸಿ ಪುರದ ಬಾಗಿಲ ಬಿಟ್ಟು ।
ಕಂಡಿಯಿಂದಲಿ ಬಂದನು—ನಾರಿಯರ ।
ಮಂಡೆಗೆ ಚೆಂಡಿಟ್ಟನು—ತೋರಿಸುವರ ।
ಕಂಡು ತಾ ನಗುತಿದ್ದನು—ಕೌತುಕವೆಂದು ।
ದಿಂಡೆಯರು ಮಡುವಿನೊಳಗೆ ಹಾಕಿ ನಡೆದರು ॥ ೨ ॥

ಗೆಳೆಯರೆಲ್ಲರು ಕೂಡಿ ಚೆಂಡು ತಾ ಎನಲಾಗಿ ।
ಗುಳುಗುಳಿಸುವ ವಿಷದ ಯಮುನಾತಡಿಯಲಿ ನಿಂದು ।
ಬಳಿಯ ವೃಕ್ಷದ ಮೇಲೇರಿ ತಾ ಧುಮುಕಲು ।
ಕಳಕಳಿಸುವ ಗೋಪಾಲರಳುತಲಿರೆ ।
ಇಳಿದ ನೀರೊಳಗಾಗಲು—ನಾಗರ ಫಣಿ ।
ತುಳಿದು ಕುಣಿಕುಣಿಯುತಿರಲು—ಬ್ರಹ್ಮನು ಬಂದು ।
ತಿಳಿದು ಮದ್ದಲೆ ಹೊಯ್ಯಲು—ಇಂದ್ರಾದ್ಯರು ।
ನಲಿದು ತಾಳವನಿಟ್ಟು ಕೊಂಡಾಡುತಿದ್ದರು ॥ ೩ ॥

ಮಗನ ಸುದ್ದಿಯ ಕೇಳಿ ಹರಿದು ಬಂದಳು ಗೋಪಿ ।
ನಗರದ ಹೊರಗಾಗಿ ಬಾಯ ನಾದದಿಂದ ।

ವಿಗಡೆಯರು ಬಿಟ್ಟ ಮಂಡೆಯು ಜುಂಜು ಕೆದರುತ ।
ತೆಗೆದು ಮಣ್ಣನೆ ತೂರಿ ಕುಳಿತಲ್ಲಿಂದಲೆ ನಮ್ಮ- ।
ನ್ನಗಲಿ ಹೋಗುವರೆ ಹೀಗೆ—ರಂಗ ನಮ್ಮ ।
ಮೊಗವ ನೋಡುವುದೆಂದಿಗೆ—ನೋಡದ ಕಣ್ಣ ।
ತೆಗೆದು ಕೀಳುವೆನಿಂದಿಗೆ—ಪಡೆದ ಪೊಟ್ಟೆ ।
ದಗದಗಿಸಲು ಕೊಟ್ಟು ಮುನಿಯದೆ ಬಾ ಬೇಗ ॥ ೪ ॥

ಏನನೆಂಬೆನು ಕೃಷ್ಣ ನಿನ್ನ ಕಾಣದೆ ಪುರದ ।
ಮಾನಿನಿಯರು ಬೆರಗಾಗಿ ಬೀಳುತ ಕರುವ ।
ಕಾಣದಿರೆತ್ತಿಗೆ ಕರುವನು ಬಿಡುವರು ।
ಆ ನಾಸಿಕದ ಮೂಗುತಿ ಕಿವಿಗಿಡುವರು ।
ಧೇನು ಮೇವನೆ ತೊರೆದುವು—ಗೋವುಗಳನ್ಯ- ।
ರಾಮನೆಗೋಡಿದುವು—ವತ್ಸಗಳಿಲ್ಲ ।
ಮೌನದಿ ಮೊಲೆ ತೊರೆದುವು—ಕೃಷ್ಣಯ್ಯನ ।
ವೇಣುನಾದದ ಧ್ವನಿ ಕೇಳದೆ ಮೆಚ್ಚವು ॥ ೫ ॥

ದ್ವಾರಕಿ ಕೃಷ್ಣ ನೀ ಬಾಯೆಂದು ಕರೆವೆನೊ ।
ತೋರುವ ಸಮಪಾದ ವಿಟ್ಠಲನೆಂಬೆನೊ ।
ಶ್ರೀರಮಣ ವೆಂಕಟನೆಂದು ಒದರುವೆನೊ ।
ಶ್ರೀರಂಗಶಯನನೆಂದೆನಲ್ಲದೆ ನಿನ್ನ ।
ಚೋರ-ಜಾರನೆಂದೆನೆ—ಹದ್ದಿನ ಮೇಲೆ ।
ಏರಿ ತಿರುಗುವನೆಂದೆನೆ—ಬೆಣ್ಣೆಯ ಕದ್ದು ।
ಸೂರೆಮಾಡುವನೆಂದೆನೆ—ಕೃಷ್ಣಯ್ಯ ನೀ ।
ಬಾರಯ್ಯ ಬಾರದಿದ್ದರೆ ಪ್ರಾಣ ನೀಗುವೆ ॥ ೬ ॥

ಕಣ್ಣೆತ್ತಿ ನೋಡಿದನೆಂದೆನೆ ಕಡೆಗೋಲ ।
ಬೆನ್ನಲಿ ಹಿಡಿದನೆಂದೆನೆ ಗಲ್ಲ ಸೂರಿ ।

ಮಣ್ಣ ಕಚ್ಚಲು ಬಾಯ ತೆರೆಯುವನೆಂದೆನೆ ।
ಮಣ್ಣ ಬೇಡಲು ನಾ ಕೊಡಲಾರೆನೆಂದೆನೆ ।
ಎನ್ನ ಕುತ್ತಿಗೆ ಕೊಯ್ವರೆ—ಮಾತೆಯ ಮಾತು ।
ಮನ್ನಿಸಿ ವನಕೆ ಪೋಪರೆ—ಬಲಭದ್ರ ।
ಅಣ್ಣನಿಗೆ ಮುಖವ ತೋರೆ—ಕೃಷ್ಣಯ್ಯ ನೀ ।
ಸಣ್ಣವನೆನ್ನದೆ ಹರಿಯ ಕೊಂಡಾಡಿದೆ ॥ ೭ ॥

ಎಂದ ಮಾತನು ಕೇಳುವಾ ಸಮಯ ನಾಗಿಣಿ- ।
ವೃಂದವೆಲ್ಲವು ತಮ್ಮ ಕಂಠಭೂಷಣರಾಗಿ ।
ಅಂದದ ಮೇಲುದ ಸುತ್ತಿಕೊಂಡಿರೆ ಅರ- ।
ವಿಂದನಾಭಾಚ್ಯುತ ಕೇಶವ ಮುರಹರ ।
ಮಂದರಧರ ಹರಿಯೆ—ನಿನಗೆ ನಾವು ।
ಮಂದಾಕಿನಿಯ ಸರಿಯೆ—ಮಾಂಗಲ್ಯದ ।
ಚೆಂದ ಕಾಯ್ದೆ ದೊರೆಯೆ—ಹರಿಯ ಕೃಪೆ- ।
ಯಿಂದ ಕರೆದು ನಮ್ಮ ಕಾಯಬೇಕೆಂದರು ॥ ೮ ॥

ಇಂತಿಂತು ಸ್ತವನವ ಮಾಡೆ ಕಾಳಿಂಗನ ।
ಕಾಂತೆಯರ ಸ್ತೋತ್ರಕೆ ಮೆಚ್ಚಿ ನಾಗನ ಬಿಟ್ಟು ।
ಕಂತುಕಸಹಿತ ಪಂಕಜನಾಳವನೆ ಕೊಂಡು ।
ಸಂತಸದಲಿ ಇಕ್ಕುತ—ಶೋಕದಿ ನೀವು ।
ಭ್ರಾಂತಿ ಬಿಡಿರ ಎನ್ನುತ—ಬರಿದೆ ಎಲ್ಲ ।
ಸಂತೆ ಕೂಡಿದೆ ಎನ್ನುತ—ನಾ ಹಸಿದೆನು ।
ಪಂತಿಭೋಜನ ಕೊಂಡು ನಡೆಯಿರಿ ಮನೆಗೆಂದ ॥ ೯ ॥

ಸುರರಿಗೆ ಸುಧೆ ಮುಂಚೆ ಉಣಿಸಿದ ಪರಬ್ರಹ್ಮ ।
ಪರಿಪರಿ ಭೋಜನ ಮಾಳ್ಪ, ಕಂಡವರಾರು ? ।
ಸುರದುಂದುಭಿ ಪೊಡೆದು ಪಾರಿಜಾತದ ಮಳೆ ।
ಸುರಿಸಿದರಾಕ್ಷಣಕೆ—ಬ್ರಹ್ಮನು ತಾನು ।

ತೆರಳಿದನಾಶ್ರಮಕೆ—ಪುರಂದರವಿಠಲ।
ತಿರುಗಿದ ನಿಜಧಾಮಕೆ—ಕೃಷ್ಣನ ಲೀಲೆ।
ಗುರುದಯೆಯಲಿ ನಮ್ಮ ಹರಿಯ ಕೊಂಡಾಡಿದೆ ॥೧೦॥

೮೭

ರಾಗ—ಆರಭಿ ತಾಳ—ಆದಿ

೧ ಆಡಿದನೊ ರಂಗ ಅದ್ಭುತದಿಂದಲಿ।
ಕಾಳಿಂಗನ ಫಣಿಯಲಿ—ಆಡಿದನೊ ॥ಪ॥

ಪಾಡಿದವರಿಗೆ ಬೇಡಿದ ವರಗಳ।
ನೀಡುತಲಿ—ದಯಮಾಡುತಲಿ—ನಲಿ-।
ದಾಡುತಲಿ—ಬೆಣ್ಣೆ ಬೇಡುತಲಿ—ಕೃಷ್ಣ ॥ಅ. ಪ.॥

ಅಂಬುರುಹೋದ್ಭವ ಅಖಿಳಸುರರು ಕೂಡಿ।
ಅಂಬರದಲಿ ನಿಂತವರು ಸ್ತುತಿಸೆ।
ರಂಭೆ-ಊರ್ವಸಿ ರಮಣಿಯರೆಲ್ಲರು॥
ಚೆಂದದಿಂ ಭರತನಾಟ್ಯವ ನಟಿಸೆ।
ಝುಂತಕ ತಕಧಿಮಿ ತದಿಗಣತೋಂ ಎಂದು।
ಝುಂಪೆತಾಳದಿ ತುಂಬುರನೊಪ್ಪಿಸೆ॥
ಧಾಪಮಪಧಸರಿ ಎಂದು ಧ್ವನಿಯಿಂದ।
ನಾರದ ತುಂಬುರು ಗಾನವ ಮಾಡಲು।
ನಂದಿಯು ಚೆಂದದಿ ಮದ್ದಲೆ ಹಾಕಲು ॥೧॥

---

೧ ಮ ಮತ್ತು ಇ ಪ್ರತಿಗಳಿಂದ ಆರಿಸಿದೆ.

ಫಣಿಯ ಮೆಟ್ಟಿ ಬಾಲವ ಕೈಯಲಿ ಪಿಡಿದು ।
ಫಣಫಣಿಸುತ ನಾಟ್ಯವನಾಡೆ ।
ದಿನಪಮಂಡಲದಂತೆ ಪೊಳೆಯುವ ಮುಖದೊಳು ॥
ಚಲಿಸುತ ನೀಲಕೇಶಗಳಾಡೆ ।
ಕಾಲಲಂದಿಗೆ ಗೆಜ್ಜೆ ಘುಲುಘುಲುಘುಲುಘುಲು ।
ಘುಲುರೆಂದು ಉಡಿಗೆಜ್ಜೆ ಗಂಟೆಗಳಾಡೆ ॥
ದುಷ್ಟ ಕಾಳಿಂಗನ ಮೆಟ್ಟಿ ಭರದಿಂದ ।
ಪುಟ್ಟ ಪಾದವನು ಇಟ್ಟ ಶ್ರೀಕೃಷ್ಣನು ।
ಮೆಟ್ಟದ ತದ್ಧಿಮಿ ತಧಿಗಣತೋಂ ಎಂದು ॥ ೨ ॥

ಸುರರು ಪುಷ್ಪದ ವೃಷ್ಟಿಯ ಕರೆಯಲು ।
ಸುದತಿಯರೆಲ್ಲರು ಪಾಡಲು ।
ನಾಗಕನ್ನೆಯರು ನಾಥನ ಬೇಡಲು ।
ನಾನಾವಿಧ ಸ್ತುತಿ ಮಾಡಲು ॥
ರಕ್ಕಸರೆಲ್ಲರು ಕಕ್ಕಸವನೆ ಕಂಡು ।
ದಿಕ್ಕಿದಿಕ್ಕುಗಳಿಗೋಡಲು ॥
ಚಿಕ್ಕವನಿವನಲ್ಲ ಪುರಂದರವಿಟ್ಠಲ ।
ವೆಂಕಟರಮಣನ ಬೇಗ ಯಶೋದೆ ।
ಬಿಂಕದೊಳೆತ್ತಿ ಮುದ್ದಾಡೆ ಶ್ರೀಕೃಷ್ಣನ ॥ ೩ ॥

## ೮೮

### ಉಗಾಭೋಗ

೧ ಕಾಳಿಂದಿಯ ಮಡುವಿನಲಿ ಧುಮುಕಿ ।
ಕಾಳಿಂಗನ ಫಣೆಫೂತ್ಕಾರ ಮೇಲುಸುರದನ್ನ ।

೧ ಆ (IV) ೩ ಪ್ರತಿಗಳಿಂದ ಎತ್ತಿ ಬರೆದಿದೆ. ಇದರ ಅರ್ಥ ಸ್ಪಷ್ಟವಾಗುವುದಿಲ್ಲ.

ಭಾಮೆಯೆಳಸಿರಲು ತೋಂಧಿಗಿಧಿಗಿ ಧಾಂಧಾಂಧಿಮಿ- ।
ಗೊಳಿಸಿ ಅಜ ಮೃದಂಗವ ತಟ್ಟಿ ಇಂದುಧರ ।
ತಾಳ ಪಿಡಿದು ಘಟ್ಟಿಸಲು ತಥಂತನನವೆಂದು ।
ಸ್ವರವೆತ್ತಿ ನಾರದ ಪಾಡಲು ಕುಣಿ ಎದೆಯಲ್ಲಿ ಕೃಷ್ಣ ।
ಎಂದವಗೆ ವರವಿತ್ತು ಮನ್ನಿಸಿ ಪೂಜೆಗೊಂಡು ।
ಗೋವಿಂದ ಗೋಪಾಲಕರನೊಲಿಸಿ ।
ಗೋವಳರಂಕದರ್ಪ ಕೇಳಿ ನಂದಗೋಪಿಯರಿ- ।
ಗಾನಂದ ಅಭಿನವ ಈತ ಪುರಂದರವಿಠಲ ॥

೮೯

ರಾಗ—ಸಾರಂಗ ತಾಳ—ಆದಿ

೧ ಕಾಳಿಯಮರ್ದನ ರಂಗಗೆ—ಹೇಳೆ ಗೋಪಮ್ಮ ಬುದ್ಧಿ ।
ಕೇಳಲೊಲ್ಲನು ಎನ್ನ ಮಾತನು ॥ ಪ ॥

ದಿಟ್ಟ ನೀರೊಳು ಕಣ್ಣು ಮುಚ್ಚನೆ—ಹೋಗಿ ।
ಬೆಟ್ಟಕೆ ಬೆನ್ನಾತು ನಿಂತನೆ ॥
ಸಿಟ್ಟಲಿ ಕೋರೆದಾಡೆ ತಿಂದನೆ—ಆಹ ।
ಗಟ್ಟಿ ಉಕ್ಕಿನ ಕಂಬ ಒಡೆದು ಬಂದನೆ ॥ ೧ ॥

ಮೂರಡಿ ಭೂಮಿಯ ಬೇಡಿದನೆ—ನೃಪರ ।
ಬೇರನಳಿದು ಕೊಡಲಿ ಪಿಡಿದನೆ ॥
ನಾರಮುಡಿಯನುಟ್ಟು ಬಂದನೆ—ಅಹ ।
ಚೋರತನದಿ ಪಾಲ್ಬೆಣ್ಣೆಯ ತಿಂದನೆ ॥ ೨ ॥

---

೧ ಈ (ಚ) ಪ್ರತಿಯಿಂದ ಆರಿಸಿಕೊಂಡಿದೆ.

ಬತ್ತಲೆ ನಾರಿಯರನಪ್ಪಿದ—ಹೋಗಿ ।
ಉತ್ತಮಾಶ್ವವನು ಹತ್ತಿದ ॥
ಹತ್ತವತಾರವ ತಾಳಿದ—ನಮ್ಮ ।
ಭಕ್ತವತ್ಸಲಸ್ವಾಮಿ ಪುರಂದರವಿಠಲನು ॥ ೩ ॥

# ೭. ವೇಣುನಾದಲೀಲೆ

## ೯೦

ರಾಗ—ಶ್ರೀ ತಾಳ—ಅಟ

೧ ವೃಂದಾವನದೊಳಾಡುವನಾರೆ—ಗೋಪ— ।
ಚಂದಿರವದನೆ ನೋಡುವ ಬಾರೆ ॥ ಪ ॥

ಅರುಣಪಲ್ಲವ ಪಾದಯುಗಳನೆ ದಿವ್ಯ— ।
ಮರಕತ ಮಂಜುಳಾಭರಣನೆ ॥
ಸಿರಿವರ ಯದುಕುಲ ಸೋಮನೆ ಇಂಥ— ।
ಪರಿಪೂರ್ಣ ಕಾಮ ನಿಸ್ಸೀಮನೆ ॥ ೧ ॥

ಹಾರ-ಹೀರ ಗುಣಧಾರನೆ—ದಿವ್ಯ ।
ಸಾರಶರೀರ ಶೃಂಗಾರನೆ ॥
ಆರಿಗಾದರು ಮನೋದೂರನೆ ತನ್ನ— ।
ಸೇರಿದವರ ಮಾತ ಮೀರನೆ ॥ ೨ ॥

ಮಕರಕುಂಡಲ ಕಾಂತಿಭರಿತನೆ—ದಿವ್ಯ ।
ಅಕಳಂಕರೂಪಲಾವಣ್ಯನೆ ॥
ಸಕಲರೊಳಗೆ ದೇವನೀತನೆ—ನಮ್ಮ ।
ಮುಕುತೀಶ ಪುರಂದರವಿಟ್ಠಲನೆ ॥ ೩ ॥

---

೧ ಎ-ಓ ಪ್ರತಿಗಳಿಂದ ಆರಿಸಿಕೊಂಡಿದೆ.

### ೯೧

ರಾಗ—ಶ್ರೀ                                                                                  ತಾಳ—ಆದಿ

೧ ಯದುನಂದನನ ನೋಡುವ—ಬಾರೆ ಲತಾಂಗಿ ।
ಹದಿನಾಲ್ಕು ಜಗವನ್ನು ಪೊರೆವ—ನೀಲಘನಾಂಗನ || ಪ ||

ಬಿಗಿದುಟ್ಟ ಕನಕಾಂಬರ—ಕಾಂಚಿಯ ದಾಮ ।
ನಗೆಯುರಳ ಧರಿಸಿದವನ ।
ಅಗಣಿತ ಗುಣನಿಧಿ ಜಗವ ಮೋಹಿಪ ಕೃಷ್ಣನ || ೧ ||

ಸಣ್ಣ ಪೊಂಗಳಲೂದುತ—ವನ್ಯದಳಾಕ್ಷ ।
ಕಣ್ಣ ಸನ್ನೆಯ ಮಾಡುತ ||
ಚಿಣ್ಣರ ಒಡಗೂಡಿ ಚಿಗಿದು ಬಾಹ ಕೃಷ್ಣನ || ೨ ||

ಮಂದಹಾಸ ಮುಖಾಂಬುಜ—ಪೊಂದಿದಂಥ ।
ಗಂಧ-ಕಸ್ತುರಿ ತಿಲಕಾ ।
ಬಂದ ನಮ್ಮ ಪುರಂದರವಿಟ್ಠಲ ಇಂದಿರೆಯರಸನ || ೩ ||

### ೯೨

ಸುಳಾದಿ

ಧ್ರುವತಾಳ

೧ ಅಂಗುಟ ಮಾತುರನೆಂಬ ಮೂರುತಿ ಪರೀಕ್ಷಿಸಿತು ।
ಕಂಡು ಕಂಡರಸಿಕೊಂಬ ಕುಮಾರಿಯ ಮೂರುತಿಯು ।

---

೧ ಊ (ಕ) ಪ್ರತಿಗಳಿಂದ ಆರಿಸಿಕೊಂಡಿದೆ.
೨ ಇ (ಮುದ್ರಿತ) ಪ್ರತಿಗಳಿಂದ ತೆಗೆದುಕೊಂಡಿದೆ.

ಆತುಮ ಮೂರುತಿ ಅಂತರಾತುಮ ಮೂರುತಿಯು ।
ಬಿಂಬ ಮೂರುತಿ ಜೀವದಾಕಾರ ಮೂರುತಿಯು ।
ಅಣುರೇಣುವೆಂಬ ಚಿನ್ಮಯ ಮೂರುತಿಯು ।
ಮುನಿಗಳ ಹೃದಯದೊಳು ಮಿನುಗುವ ಮೂರುತಿಯು ।
ಬೊಮ್ಮಗಾದಾ ಮೂರುತಿಯು ತಾನೆಲ್ಲಿಂದೆಲ್ಲಿ ಬಂದಿತು ।
ಅಮರರಾಭರಣ ತಾನೆಲ್ಲಿಂದೆಲ್ಲಿಗೊದಗಿತೊ ।
ಎನಗೆ ಪ್ರಸನ್ನನಾದ ಉಡುಪಿಯ ಕೃಷ್ಣಮೂರುತಿ ।
ಪುರಂದರವಿಠಲನ ಒಲುಮೆಯೆಂತೊ ! ॥ ೧ ॥

ಮಟ್ಟೆತಾಳ

ಮಂದಾರಮಲ್ಲಿಗೆ ತುರುಬಲಿ ದಿವ್ಯಾಂಬರವನ್ನುಟ್ಟು ಗೋ- ।
ವಿಂದನಾಡಿದಾಟಗಳನು ಪ್ರಬಂಧಗೀತಗಳ ಮಾಡಿ ।
ಚೆಂದ-ಚೆಂದದಲಿ ಪಾಡಿದಳು ಮೊಸರ ಮಥನದಲಿ ತನ್ನ ।
ಕಂದನ ಅದ್ವಿತೀಯ ಅಪ್ರಮೇಯಾಗಮ್ಯಗೋಚರನೆಂದು ।
ನಂದವ್ರಜವೆತ್ತ ಉಡುಪಿಯ ಕೃಷ್ಣನ ಮಹಿಮೆ-
ಯೆತ್ತಲೆಂದು ।
ವೃಂದಾರಕವಂದ್ಯ ಪುರಂದರವಿಠಲನೆ ಬಲ್ಲನೆನುತಿರೆ ॥ ೨ ॥

ತ್ರಿವಿಡೆತಾಳ

'ಪೊಂಬಟ್ಟೆ ಪಾಲ್ಮೊಸರಿಂದಲಿ ತೋದಿದೆ ।
ಕಂಬುಕಂಧರ ಕೆನೆ-ಬೆಣ್ಣೆಯುಲೊರೆದಿದೆ ।
ಅಂಬುಜನಾಭ ನೀ ಎಲ್ಲೆಲ್ಲಿ ತುಡುತಿಂದೆ ।'
ಎಂಬ ಗೋಪಿಗೆ ಕೃಷ್ಣ ಅಂಜುತಿದ್ದುದ ಕಂಡೆ ।
ಅಂಬುಜಭವಪಿತ ಈ ಉಡುಪಿಯ ಕೃಷ್ಣ ।
ತಾಂಬಾಲಕನಾದ ಪುರಂದರವಿಠಲ ॥ ೩ ॥

ಅಟತಾಳ

ದೇವತರುವು ನಮ್ಮ ದೇವ ಕೊಳಲನೂದೆ ।
ದೇವನಾರಿಯರುಟ್ಟ ದೇವಾಂಗದುಗುಲವ ।
ಆವ ಸುಸ್ವರವೊ ಆವ ಸುಜಾತಿಯೊ ।
ಆವ ಮೂರ್ಛನವೊ ಆವ ಸುನಾದವೊ ।
ದೇವ ಪುರಂದರವಿಠಲನಂಘ್ರಿಗಳಾಣೆ ।
ಈ ಉಡುಪಿಯ ಕೃಷ್ಣನಾದಿಮೂರುತಿ ತಪ್ಪಾ ॥ ೩ ॥

ಆದಿತಾಳ

ಒಂದು ಕೈಯಲಿ ಕಡೆಗೋಲು ಮ- ।
ತ್ತೊಂದು ಕೈಯಲಿ ಕಡೆವ ನೇಣು ।
ನಿಂದು ತಾಯ ಮೊಗವಾ ನೋಡಿ ।
ನಂದನ ಕಂದ ನಲಿದಾಡುತ ಧಿಂ ಧಿಂ ಧಿಂ ।
ಧಿಂ ಧಿತ ಮುದ್ದು ಪುರಂದರವಿಠಲ ।
ಉಡುಪಿಯ ಕೃಷ್ಣ ॥ ೪ ॥

ಜತೆ

ಉಡುಪಿಯ ಸಿರಿಕೃಷ್ಣ ಪುರಂದರವಿಠಲ ।
ಬಿಡೆನೊ ಬಿಡೆನೊ ನಿನ್ನ ಚರಣಕಮಲವ ॥

೬೩

ರಾಗ—ನೀಲಾಂಬರಿ ತಾಳ—ಅಟ

೧ ರಂಗ ಕೊಳಲನೂದಲಾಗ । ॥ ಪ ॥
ಮಂಗಳಮಯವಾಯ್ತು ಧರೆ-ಜ- ।

೧ ಅ (೮-೧೧) ಆ (೨) ಎ-ಓ ಪ್ರತಿಯಿಂದ ಆರಿಸಿದೆ.

ನಂಗಳು ಚೈತನ್ಯ ಮರೆದು ।
೧ ರಂಗಧ್ಯಾನಪರರಾದರು ॥ ಅ. ಪ ॥

ಬಾಡಿದ ಮಾಮರಗಳು ಗೊನೆಯೊಡೆದುವು ।
ತೀಡುವ ಮಾರುತ ಮಂದಗತಿಗೊಯ್ಯೆ ॥
ಬಾಡಿದ ಬರಲು ಫಲದ ಗೊಂಚಲು ।
ಪಾಡಲೊಲ್ಲವಳಿಕುಲಗಳು ॥
ಹೇಡಿಗೊಂಡುವು ಜಕ್ಕವಕ್ಕಿ ಗಿಳಿ ಮಾ- ।
ತಾಡದೆ ಕಳೆಗುಂದಿದುವು ಕೋಗಿಲೆ ॥
ಓಡಾಟ ವೈರಾಟ ಬಿಟ್ಟು ಖಗಮೃಗ ।
ಗಾಢ ನಿದ್ರಾವಶವಾದುವು ॥ ೧ ॥

ಕೆಳಗಿನುದಕ ಉಬ್ಬೇರಿ ಬಂದುವು ।
ತುಳುಕಿ ಚೆಲ್ಲಾಡಿ ನಿಂದಳು ಯಮುನೆ ॥
ಮಳೆಯ ಮೋಡೊಡ್ಡಿ ಮೇಘಾಳಿ ಧಾರಿಟ್ಟುವು ।
ಕಲುಕರಗಿ ಕರಗಿ ನೀರಾದುವು ॥
ನಳಿನ ಚಂಪಕ ನಾಗ ಪುನ್ನಾಗ ಪಾ- ।
ಟಲ ಸೇವಂತಿಗೆ ಕುಂದಮೊಲ್ಲೆ ಮಲ್ಲಿಗೆ ಬ- ॥
ಕುಲ ಮಾಲತಿ ಜಾಜಿ ಪರಿಮಳಗೂಡಿ ।
ನೀಲಾಂಗನಂಘ್ರಿಗೆ ನೆರೆದುವು ॥ ೨ ॥

ಕೆಚ್ಚಲು ಬಿಗಿದು ತೊರೆದ ಮೊಲೆಯೊಳು ।
ವತ್ಸದೊಡಲಾಸೆ ಜರಿದು ಎಳೆಹುಲ್ಲ ॥
ಕಚ್ಚದಲ್ಲಿಗಲ್ಲಿ ನಿಂದುವು ತಮ್ಮಯ ।
ಪುಚ್ಛವ ನೆಗಹಿ ನೀಂಟಿಸಿ ॥

---

೧ ಸ್ತ್ರೀಯರು ಅಂಗಪರವಶರಾದರು.

ಟಿ. ಸೂ:— ಪ್ರಾಚೀನ ಪ್ರತಿಗಳಲ್ಲಿ ಪುರಂದರವಿಠಲ ಅಂಕಿತವಿದೆ.

ಅಚ್ಯುತನಾಕೃತಿ ನೋಡಲು ಸುರರಿಗೆ ।
ಅಚ್ಚರಿಯಾಯಿತು ಆವು ಕಂಡಾನಂದ ॥
ಪೆಚ್ಚಿ ಮುಕುಂದನ ಲೀಲಾವಿನೋದಕೆ ।
ಮೆಚ್ಚಿ ಕುಸುಮವ ಸುರಿದರು ॥ ೩ ॥

ಮುದ್ದುಮೋಹನನ ಮಂಜುಳ ಸಂಗೀತ ।
ಸದ್ದನಾಲಿಸಿ ಗೋಪಾಂಗನೆಯರೆಲ್ಲ ॥
ಬುದ್ಧಿ ಸೂರಾಡಿ ತಮ್ಮಾಲಯವನೆ ಬಿಟ್ಟು ।
ಎದ್ದು ಪರವಶರಾದರು ॥
ಸಿದ್ಧಮುನಿಜನರಿದ್ದ ಸಮಾಧಿಯಿಂ- ।
ದೆದ್ದೆದ್ದು ಕುಣಿದೆದ್ದರು ಎದುರಾಗಿ ॥
ಗದ್ದುಗೆಯರಸನ ಒಲಿಸಿಕೊಂಡರು ।
ಗೆದ್ದರು ಭವದ ಸಮುದ್ರವನು ॥ ೪ ॥

ಶ್ರೀಮನೋಹರ ಗೋಪಾಲಮೂರುತಿ ।
ಆ ಮಧುಕುಂಜವನದಿ ತ್ರಿಭಂಗಿಯಲಿ ॥
ಹೇಮಾಂಬರವುಟ್ಟು ಗೀರುಗಂಧ ಕಸ್ತೂರಿ ।
ನಾಮ ಮುಕುಟದ ಬೆಳಕಿನಲಿ ॥
ದಾಮ ವನಮಾಲೆ ಶ್ರೀವತ್ಸ ಕೌಸ್ತುಭ ।
ಸ್ವಾಮಿ ಪುರಂದರವಿಟ್ಠಲರಾಯನ ॥
ರಾಮಕ್ರಿ–ಗುಂಡಕ್ರಿ ಮೇಘರಂಜನೆ ಪಾಡಿ ।
ಸಾಮಗಾನಪ್ರಿಯ ನಮೊ ಎಂದರು ॥ ೫ ॥

೯೪

ರಾಗ—ಶಂಕರಾಭರಣ ತಾಳ—ರೂಪಕ

೧ ನಳಿನಜಾಂಡ ತಲೆಯದೂಗೆ ।
ಇಳೆಯು ನಲಿದು ಮೋಹಿಸುತಿರಲು ॥
ಕೊಳಲ ಪಿಡಿದು ಬಾರಿಸಿದನು ।
ಚೆಲುವ ಕೃಷ್ಣರಾಯನು ॥ ಪ ॥

ಪೊಳೆವ ಪೊಂಬಟ್ಟೆಯ ದಟ್ಟಿ ।
ಅಳವಡಿಸಿ ನೆಗಹಿ ನಿಂದ ॥
ಹಲವು ರನ್ನದುಂಗುರವಿಟ್ಟ ।
ಚೆಲುವ ಬೆರಳ ನಟಿಸುತ ॥
ಲಲಿತ ವಾಮಭಾಗ ತೋಳ- ।
ಲೊಲಿದು ಓರೆನೋಟದಿಂದ ॥
ಬಲದ ಪಾದ ಎಡಕೆ ಚಾಚೆ ।
ನಳಿನಪದಗಳೊಪ್ಪುತಿರಲು ॥ ೧ ॥

ಸೆಳೆನಡುವಿನೊಳಗೆ ಕತ್ತರಿ ।
ಕಳೆಯಸಂಚಿ, ಗಜುಗುಚೀಲ ॥
ಬಿಳಿಯ ಮಣಿಯು:ಗುಳ್ಳೆಗಳಿರಲು ।
ಮಲಯಜಾನುಲೇಪನ ॥
ಜಲಜನೇತ್ರ ಕೌಸ್ತುಭಾದಿ- ।
ಗಳದಿ ಸ್ವರಗಳೊಪ್ಪುತಿರಲು ॥
ಲಲಿತವೇಣು ಕಲ್ಪನೆಯಲಿ ಗೋ- ।
ವಳರೆಲ್ಲರು ಕುಣಿಯಲು ॥ ೨ ॥

೧ N ಪ್ರತಿಯೊಂದರಲ್ಲಿಯೆ ಸಿಕ್ಕಿದೆ.

ವಿ. ಸೂ:— ಮೂರನೆಯ ನುಡಿಯ ಏಳನೆಯ ಸಾಲು ಇಲ್ಲ.

ಮಾರವಿ ದೇಸಿ ಗುರ್ಜರಿ ಭೈರವಿ ।
ಗೌರಿ ನಾಟಿ ಸಾವೇರಿ ಆಹೇರಿ ॥
ಪೂರವಿ ಕಾಂಬೋದಿ ಪಾಡಿ ದೇಶಾಕ್ಷಿ ಶಂ- ।
ಕರಾಭರಣ ರಾಗದಿ ॥
ಪೂರವಿಕಲ್ಯಾಣಿ ವಸಂತ ತೋಡಿ ।
ವರಾಳಿ ಗುಂಡಕ್ರಿ ಸಾರಂಗ ಸಾಳಗ ॥
........................................
ಸೋರಟ ಭೂಪಾಳಿ ಶ್ರೀರಾಗದಿಂದಲಿ ॥ ೩ ॥

ಹರುಷದಿ ಬಾರಿಸುವ ರವಕೆ ।
ಪುರದ ಸ್ತ್ರೀಜನರು ಎಲ್ಲ ॥
ಮರೆದು ಮಕ್ಕಳ ಮನೆಯ ಕೆಲಸ ।
ಮರೆದು ಹರಿಯ ಬಳಸಲು ॥
ಕರಿಯು ಮೃಗವು ಕೇಸರಿ ಶರಭ ।
ಹರಿಣ ನವಿಲು ಉರಗ ಮೋಹಿಸಿ ॥
ನೆರೆದು ಮರೆದು ಜಾತಿವೈರವ ।
ಸ್ವರವ ಕೇಳುತಿರಲು ॥ ೪ ॥

ಕರಗೆ ಗಿರಿಯ ಕಲ್ಲು ತರುಗ- ।
ಳೆರಗಿ ಪಕ್ಷಿ ತತಿಗಳಿರಲು ॥
ಸುರರು ಸುಮನ ಸುರಿಯುತಿರಲು ।
ಧರೆಯು ಮುದದಿ ಕುಣಿಯುತಿರಲು ॥
ಶರಧಿ ಉಕ್ಕಿ ಸರಿತು ಸೊಕ್ಕಿ ।
ಪುರರಿಪು ವಿಧಿ ಪೊಗಳುತಿರಲು ॥
ವಿರಚಿಸಿದ ಪುರಂದರವಿಠಲ ।
ಮುರಲಿಗಾನ ಮಾಡಿದ ॥ ೫ ॥

೯೩

ರಾಗ—ಭೈರವಿ ತಾಳ—ಆದಿ

೧ ಜಯಜಯ ಶ್ರೀರಾಮ ನಮೋ ।
ಜಯಜಯ ಶ್ರೀಕೃಷ್ಣ ನಮೋ ॥ ಪ ॥

ಸಿರಿಯರಸನು ಶೃಂಗಾರವ ಮಾಡಿ ।
ಸಿರಿಗಂಧವನೆ ಹಣೆಗಿಟ್ಟು ॥
ತರುಣ ತುಳಸಿ ವನಮಾಲೆಯ ಧರಿಸಿ ।
ಹರಿ ತುರುಕಾಯಲು ಹೊರಗೆ ಹೊರಟನು ॥ ೧ ॥

ಹೊತ್ತು ಹೋಯಿತು ತುರು ಬಿಡಿಯೆನ್ನುತ ।
ಸಾತ್ತ್ವತ ನುಡಿದನು ಗೋಪಿಯೊಡನೆ ॥
ತುತ್ತುರು ತುತ್ತುರು ತುರುತುರುಯೆನ್ನುತ ।
ಒತ್ತಿ ಸ್ವರಗಳನು ಪೊಂಗೊಳಲೂದುತ ॥ ೨ ॥

ಹರಿಸ್ವರವೆನ್ನುತ ಒಬ್ಬಳು ಕೇಳಿ ।
ನೆರೆಮನೆಗೆ ಹೋಗಿ ಕಡ ಕೇಳಿದಳು ॥
ಒರಳು ಕೊಡುವಿರಾ ಅರಿಸಿನ ಅರೆದು ।
ಮರಳಿ ಬೇಗ ತಂದೀವೆನೆನುತಲಿ ॥ ೩ ॥

ವನಿತೆ ಸಟ್ಟುಗದೊಳು ಅಕ್ಕಿಯ ತೊಳಸಿ ।
ಒನಕೆಯಿಂದ ಓಗರ ಹದ ನೋಡಿ ॥
ಮಿನುಗುವ ಸೀರೆಯ ತಲೆಗೆ ಸುತ್ತಿಕೊಂಡು ।
ವನಕೆ ಹೋಗಲೆಂದು ಹೊರಗೆ ಹೊರಟಳು ॥ ೪ ॥

ಹಸುವಿಗೆ ಇಟ್ಟಳು ಹಾಲು ಓಗರ ।
ಬಿಸಿಮುದ್ದಿಯ ಗಂಡಗೆ ಚಾಚಿ ॥

---

೧ ಊ (ಖ) ಪ್ರತಿಯಿಂದ ತೆಗೆದುಕೊಂಡಿದೆ.

ಸೊಸೆಯನು ಅಟ್ಟಿಸಿ ತೊತ್ತನು ಪಾಲಿಸಿ ।
ಮೊಸರ ಕಾಸಿ ಹೆಪ್ಪ ಹಾಕಿದಳೊಬ್ಬಳು ॥ ೫ ॥

ಗಿಳಿಗೆ ಹಾಸಿದಳು ಹಾಸು ಮಂಚವನು ।
ಅಳಿಯನ ಪಂಜರದೊಳಗಿರಿಸಿ ॥
ತಳಿಗೆಯಲ್ಲಿ ತಮ್ಮನ ಮಲಗಿಸಿ ತೊಟ್ಟಿ- ।
ಲೊಳಗೆ ಎಡೆಯನು ಮಾಡಿದಳೊಬ್ಬಳು ॥ ೬ ॥

ಅಟ್ಟವೆಂದು ಹತ್ತಿ ಅಗಳಿಯ ಮೇಲೆ ।
ಇಟ್ಟಳು ಸಾದೆಂದು ಸಗಣಿಯನು ॥
ಕಟ್ಟಿಬಾಯಿಗೆ ಕಾಡಿಗೆ ಹಚ್ಚಿ ।
ಕೃಷ್ಣನ ಸ್ಮರಿಸುತ ಹೊರಗೆ ಹೊರಟಳು ॥ ೭ ॥

ಅಂಗನೆ ಚೌರಿಯ ಕಾಲಿಗೆ ತಗುಲಿಸಿ ।
ಮುಂಗೈಯಲಿ ತಾಳಿಯ ಬಿಗಿದು ॥
ಸಿಂಗರ ಸರವನು ನಡುವಿಗೆ ಕಟ್ಟಿ ।
ರಂಗನ ಸ್ಮರಿಸುತ ಹೊರಟಳೊಬ್ಬಳು ॥ ೮ ॥

ಕಟ್ಟಿ ಮುತ್ತಿನೋಲೆ ಮೊಣಕಾಲ್ಗಳಿಗೆ ।
ಗಟ್ಟಿ ಕಂಕಣವ ಕಿವಿಗಿಟ್ಟು ॥
ತೊಟ್ಟಿಲೊಳಗೆ ಶಿಶು ಅಳುವುದ ಕಂಡು ।
ಕಟ್ಟಿದ ನೆಲುವನು ತೂಗಿದಳೊಬ್ಬಳು ॥ ೯ ॥

ತರುಣಿಯೊಬ್ಬ ಸಂನ್ಯಾಸಿಯ ಕಂಡು ।
ನೆರೆಮನೆ ಕೂಸೆಂದೆತ್ತ ಬರಲು ॥
ಅರಿದಾವ ಗಾಳಿ ಸೋಕಿತೆನುತಲಿ ।
ಪುರಂದರವಿಠಲನು ನಗುತಿದ್ದನು ಸಖಿ ॥ ೧೦ ॥

೯೬

ರಾಗ—ಮಧ್ಯಮಾವತಿ ತಾಳ—ಆದಿ

೧ ಆಡಿದನೋಕುಳಿಯ—ನಮ್ಮ ರಂಗ ।
ಆಡಿದನೋಕುಳಿಯ ॥ ಪ ॥

ಕುಂದದ ಕಸ್ತುರಿಯ—ಅಳಿ- ।
ಗಂಧದ ಓಕುಳಿಯ ॥
ಬಂದರು ಹೊರಗಿನ ನಾರಿಯರಾಡುತ ।
ಚೆಂದದ ಜೀಕುಳಿಯ ॥ ೧ ॥

ಪಟ್ಟೆಮಂಚದ ಮೇಲೆ—ನಮ್ಮ ರಂಗ ।
ಇಟ್ಟ ಮುತ್ತಿನ ಹಾರ ॥
ಬಟ್ಟಕುಚಕೆ ಕಣ್ಣಿಟ್ಟು ಒಗೆದನು ।
ಕುಟ್ಟಿದನೋಕುಳಿಯ ॥ ೨ ॥

ಆರು ಹತ್ತು ಸಾವಿರ—ಗೋಪ ।
ನಾರಿಯರನು ಕೂಡಿ ॥
ಮಾರನಯ್ಯ ಶ್ರೀಪುರಂದವಿಟ್ಠಲ ।
ಹಾರಿಸಿ ಜೀಕುಳಿಯ ॥ ೩ ॥

---

೧ ಊ (ಚ) ಪ್ರತಿಯೊಂದರಲ್ಲಿಯೆ ಸಿಕ್ಕುತ್ತಿದೆ.

# ೮. ಗೋಕುಲನಿರ್ಗಮನ

## ೯೭

ರಾಗ—ಶಂಕರಾಭರಣ ತಾಳ—ಆದಿ

೧ ಆರೇ ರಂಗನ ಆರೇ ಕೃಷ್ಣನ ।
ಆರೇ ರಂಗನ ಕರೆಯಬಂದವರು ॥ ಪ ॥

ಗೋಪಾಲಕೃಷ್ಣನ ಪಾಪವಿನಾಶನ ।
ಈಪರಿಯಿಂದಲಿ ಕರೆಯಬಂದವರು ॥ ೧ ॥

ವೇಣುವಿನೋದನ ಪ್ರಾಣಪ್ರಿಯನ ।
ಜಾಣೆಯರರಸನ ಕರೆಯಬಂದವರು ॥ ೨ ॥

ಕರಿರಾಜವರದನ ಪರಮಪುರುಷನ ।
ಪುರಂದರವಿಠಲನ ಕರೆಯಬಂದವರು ॥ ೩ ॥

## ೯೮

ರಾಗ—ವರಾಳಿ ತಾಳ—ಅಟ

೨ ಅಕ್ಕ ನಂದಗೋಪನ ಅರಮನೆಯೊಳಗೊಬ್ಬ ।
ಅಕ್ರೂರ ಬಂದನಂತೆ ॥ ಪ ॥

ಹೊಕ್ಕು ಬಳಕೆಯಿಲ್ಲ ಹೊಸಬನು ಇವನಂತೆ ।
ಇಕ್ಕೋ ಬಾಗಿಲ ಮುಂದೆ ಈಗ ರಥವ ಕಂಡೆ ॥ ಅ.ಪ. ॥

---

೧ ಎ–೬ ಪ್ರತಿಯಿಂದ ತೆಗೆದುಕೊಂಡಿದೆ.
೨ ಅ(೨) ಪ್ರತಿಯಿಂದ ತೆಗೆದುಕೊಂಡಿದೆ.

ಮಧುರಾಪಟ್ಟಣವಂತೆ ಮಾವನ ಮನೆಯಂತೆ ।
ನದಿಯ ದಾಟಲುಬೇಕಂತೆ ॥
ಎದುರು ಆರಿಲ್ಲವಂತೆ ಏಸೆಂಜೆ ಏಣಾಕ್ಷಿ ।
ಉದಯದಿ ಪಯಣವಂತೆ ॥ ೧ ॥

ಒಳ್ಳೆ ವೇಳೆಗಳಂತೆ ಬಿಲ್ಲುಹಬ್ಬಗಳಂತೆ ।
ಎಲ್ಲಾ ಬೀದಿ ಸಿಂಗರವಂತೆ ॥
ಮಲ್ಲರ ಕೂಟವಂತೆ ಮತ್ತೆ ಕಾಳಗವಂತೆ ।
ಅಲ್ಲೆ ತಾಯ್ತಂದೆಗಳ ಕಾಲಿಗೆ ನಿಗಳವಂತೆ ॥ ೨ ॥

ಮತ್ತೆ ಪಾಂಡವರಂತೆ ಮೋಹದ ಸೋದರರಂತೆ ।
ಅತ್ತೆಯ ಮಕ್ಕಳಂತೆ ॥
ಸುತ್ತ ಶತ್ರುಗಳಂತೆ ಸಕಲ ಕಾರ್ಯಗಳಂತೆ ।
ಚಿತ್ತಜನಯ್ಯನ ಚಿತ್ತ ಎರಡಾಯ್ತಂತೆ ॥ ೩ ॥

ಅಲ್ಲಿ ಪುಟ್ಟಿದನಂತೆ ಅರಸನಳಿಯನಂತೆ ।
ಇಲ್ಲಿಗೆ ಬಂದನಂತೆ ॥
ಕಳ್ಳ ಕಪಟನಂತೆ ಎಂದಿಗೂ ಹೀಗಂತೆ ।
ನಿಲ್ಲದೆ ಯಶೋದೆಗೆ ಕಣ್ಣ ನೀರಂತೆ ॥ ೪ ॥

ತಾಳಲಾರೆವು ನಾವು ಪುರಂದರವಿಠಲನ ।
ಕಾಣದೆ ನಿಲಲಾರೆವೆ ॥
ಕಾಲದಲೊಂದಾಗಿ ಕಾಮಿನಿಯರು ಕೂಡಿ ।
ಆಲಸ್ಯವಿಲ್ಲದೆ ಆಣೆಯಿಡುವ ಬನ್ನಿ ॥ ೫ ॥

## ೯೯

ರಾಗ—ಸಾರಂಗ  ತಾಳ—ಅಟ

೧ ರಂಗ ರಥವನೇರಿದನಕ್ಕ—ಮೋಹ- ।
ನಾಂಗ ನಮ್ಮ ಸೇರದೆ ಪೋಗುವನಕ್ಕ ॥ ಪ ॥

ಮಾತುಳ ಮಧುರೆಯೊಳಿಹನಂತೆ—ಅಲ್ಲಿ ।
ಮಾತಾಪಿತರಿಗೆ ಬಂಧನವಂತೆ—ಇವರು ।
ನೂತನ ಬಿಲ್ಲಿನ ಅರ್ಥಿಗಳಂತೆ ॥
ಪೀತಾಂಬರಧರನ ಪೂಜೆನೋಡುವೆನೆಂಬ ।
ಆತುರದಿಂದಿರೆ ಅಕ್ರೂರನೊಡನೆ ಈಗ ॥ ೧ ॥

ಬಲರಾಮ ಬಂಧುವಿನೊಡಗೂಡಿ—ನಂದ- ।
ನಡಿಗೆ ಯಶೋದೆಗೆ ವಂದನೆ ಮಾಡಿ—ತಾವು ।
ಬಿಡಲಾರೆವೆಂದು ಭಾಷೆಯ ನೀಡಿ ॥
ತಡೆಯೆನೆನುತ ತಾಯಿಗೆ ಭರವಸೆಯಿತ್ತು ।
ಕಡಲಶಯನನು ಕಾತರದಿಂದಲಿ ಈಗ ॥ ೨ ॥

ಮಧುರಾಪಟ್ಟಣದ ಮಾನಿನಿಯರು ಅತಿ ।
ಚದುರೆ ಚಂಚಲೆ ಚಾಪಲತೆಯರು—ನಮ್ಮ ।
ಮದನನಯ್ಯನ ಮೋಹಿಸುತಿಹರು ॥
ಕಧಿಜನಾಭ ನಮ್ಮ ಪುರಂದರವಿಟ್ಠಲ ।
ಪದುಮನಾಭನ ಪಯಣದ ನಿಲ್ಲಿಸಕ್ಕ ॥ ೩ ॥

---

೧ ಅ ( ಜಿ೩ ೪ ) ಒಂದರಲ್ಲಿಯೇ ದೊರೆತಿದೆ.

೧೦೦

ರಾಗ—ರೇಗುಪ್ತಿ ತಾಳ—ಛಾಪು

೧ ಎಲ್ಲಿಯ ಮಧುರಾಪುರವು ।
ಎಲ್ಲಿಯ ತಾ ಬಿಲ್ಲುಹಬ್ಬ ।
ಎಲ್ಲಿಯ ಸೋದರಮಾವನೆ ॥ ಪ ॥

ಎಲ್ಲಿಯ ಮಲ್ಲರ ಸಂಗ ।
ಖುಲ್ಲ ಕಂಸನು ನಮಗೆ ।
ಎಲ್ಲಿಯ ಜನ್ಮದ ವೈರಿಯೆ—ಸಖಿಯೆ ॥ ಅ. ಪ. ॥

ವೃಂದಾವನದೊಳಗಿರುವ ವೃಕ್ಷಜಾತಿಗಳೆಲ್ಲ ।
ಒಂದೊಂದು ಫಲದಿಂದಲಿ ಸಂದಣಿತವೆ ॥
ಕುಂದಕುಸುಮದಲಿರುವ ಮಂದಿರದಲಿ ಚಕೋರ
ಒಂದೊಂದು ಸುಖಭರಿತವೆ ॥
ಅಂದು ಮಾಧವ ನಮ್ಮ ಹೊಂದಿ ಕರವಿಡಿದ ।
ನಂದನ ಕಂದನ ಚರಿತವೆ ಸಖಿಯೆ ॥ ೧ ॥

ಅಕ್ರೂರ ತಾನೆಲ್ಲ ಅಚ್ಯುತಗೆ ಎಡೆಮಾಡಿ ।
ಆ ಕ್ರೂರನೆನಿಸಿದನೆ ॥
ವಕ್ರಮಾರ್ಗವ ಕೂಡಿ ವನಿತೆಯರ ಉಸಿರೆಣಿಸಿ ।
ಚಕ್ರಧರನಗಲಿಸಿದನೆ ॥
ಆಕ್ರಮಿಸಿ ಸುರಲೋಕ ಪಾರಿಜಾತವನಂಬು- ।
ಜಾಕ್ಷಿಗೆ ತಂದಿತ್ತನೆ—ಸಖಿಯೆ ॥ ೨ ॥

---

೧ ಆ ( II ) ಪ್ರತಿಯೊಂದರಲ್ಲಿ ಸಿಕ್ಕಿದೆ.

ವಿ. ಸೂ :— ಮುದ್ರಿತ ಪ್ರತಿಗಳಲ್ಲಿ ಇದಕ್ಕೆ ಜಯವ್ಯಾಸವಿಟ್ಠಲನೆಂಬ ಮುದ್ರಿಕೆ ಇದ್ದುದು ಕಾಣುತ್ತಿದೆ.

ನೀರ ಚೆಲ್ಲಾಟದೊಳು ನಿಲಿಸಿ ನಮ್ಮೆಲ್ಲರ ।
ನಾರಿಯರಿಗೆ ಚೆಲ್ಲಿದನೆ ॥
ಮೋರೆ ಮೋರೆ ನೋಡಿ ಅಧರಾಮೃತಗಳ ।
ಸಾರಿ ಸಾರಿ ಸವಿದುಂಬನೆ ॥
ದ್ವಾರಕಾಪುರವಾಸ ಪುರಂದರವಿಟ್ಠಲ ।
ಸೇರಿ ನಮ್ಮನು ಸಲಹುವನೆ—ಸಖಿಯೆ ॥ ೩ ॥

## ೧೦೧

ರಾಗ—ಸುರಟಿ ತಾಳ—ಆದಿ

೧ ವಾಸಕೆ ಯೋಗ್ಯವಲ್ಲ—ಗೋಕುಲವಿನ್ನು ।
ಬೇಸರವಾಯಿತಲ್ಲ ॥ ಪ ॥

ದೋಷರಹಿತ ಸೋಳಸಾಸಿರ ಹೆಂಗಳ ।
ಶೇಷಶಯನ ಕೃಷ್ಣ ಮೋಸ ಮಾಡಿದ ಮೇಲೆ ॥ ಅ.ಪ. ॥

ರಂಗ ಮಥುರೆಗೆಂದು—ಅಕ್ರೂರನ ।
ಸಂಗಡ ಪೋದನಂತೆ ॥
ಅಂಗಜನಯ್ಯನ ಸಂಗವಿಲ್ಲದ ಮೇಲೆ ।
ಹೆಂಗಳ ಜನ್ಮವಿದೇತಕೆ ಸುಡಲಿ ! ॥ ೧ ॥

ನಳಿನಾಕ್ಷ ಮಧುರೆಗೆಂದು—ಪೋಗುವಂಥ ।
ಸುಳಿವು ತಿಳಿಯಲಿಲ್ಲವೆ ॥
ಅಳಿ-ಗಿಳಿ-ಕೋಗಿಲೆಗಳ ರವವನು ಕೇಳಿ ॥
ಗಳಿಗೆ ಕಳೆವುದೊಂದು ಯುಗವಾದ ಬಳಿಕಿನ್ನು ॥ ೨ ॥

೧ ಎ ಪ್ರತಿಯಿಂದ ತೆಗೆದುಕೊಂಡಿದೆ.

ಪತಿ-ಸುತರನು ಬಿಟ್ಟು—ಶ್ರೀಪತಿ ನೀನೆ ।
ಗತಿಯೆಂದು ನಂಬಿರಲು ॥
ಮತಿವಂತ ಅಕ್ರೂರನ ಜೊತೆಯೊಳು ಶ್ರೀಹರಿ ।
ರಥವನೇರಿ ತಾ ಮಧುರೆಗೆ ಪೋದ ಮೇಲೆ ॥ ೩ ॥

ಮಡದಿಯರಂತೆ ನಾವು—ಒಡೆಯನೆಂದು ।
ದೃಢದಿ ನಂಬಿದ್ದೆವಮ್ಮ ॥
ಕಡುಚೆಲ್ವ ಕೃಷ್ಣನು ನಡುನೀರಲಿ ಕೈಯ ।
ಪಿಡಿಯದೆ ಬಿಟ್ಟು ತಾ ಕಡೆಗೆ ಸಾಗಿದ ಮೇಲೆ ॥ ೪ ॥

ಅಚ್ಯುತಾನಂತನನ್ನು—ನಮ್ಮವನೆಂದು ।
ನೆಚ್ಚಿಕೊಂಡಿದ್ದೆವಮ್ಮ ॥
ಮೆಚ್ಚಿದ ಬಾಲೆಯರಿಗೆ ಹುಚ್ಚು ಹಿಡಿಸಿ ಕ್ರೂರ ।
ಹೆಚ್ಚಿದ ಮಾತನು ಕೊಚ್ಚಿ ಪೋದ ಮೇಲೆ ॥ ೫ ॥

ಮುರಲಿ ನಾದವ ಕೇಳಿ—ತರಳೆಯರೆಲ್ಲ ।
ಮರುಳಾಗಿ ಬರುತಿದ್ದೇವೆ ॥
ದುರುಳ ಮನ್ಮಥನ ಪೂಸರಳಿಗೆ ಒಪ್ಪಿಸಿ ।
ಇರುಳೇ ಮಧುರೆಗೆ ತೆರಳಿ ಪೋದ ಮೇಲೆ ॥ ೬ ॥

ಸುರತಸುಖಗಳೆಂಬ—ಶರಧಿಯೊಳು ।
ಹರುಷಪಡುತಲಿದ್ದೆವೆ ॥
ನಿರುತ ಅವನ ಗುಣ ಚರಿತೆಯ ತೋರದೆ ।
ತ್ವರದಿ ನಮ್ಮೆಲ್ಲರ ತೊರೆದು ಪೋದ ಮೇಲೆ ॥ ೭ ॥

ಕಂತುಪಿತನ ಕಾಣದೆ—ಈ ಪ್ರಾಣವು ।
ಎಂತು ನಿಲ್ಲುವುದಮ್ಮ ॥
ಅಂತರಂಗದಾಸೆ ಶಾಂತಮಾಡದೆ ಪೋದ ।
ಕಾಂತನ ಕಾಣದೆ ಭ್ರಾಂತರಾದ ಮೇಲೆ ॥ ೮ ॥

ಇಂದಿರಾಪತಿ ನಮ್ಮ—ಮಂದಿರದೊಳು ।
ಬಂದು ಹೋಗುತಲಿರಲು ॥
ಸಂದೇಹದಿ ಇವನ ಹೊಂದಿದರಿವರೆಂದು ।
ಮಂದಿಯೊಳಗೆ ಅಪನಿಂದೆಯ ಪೊತ್ತೆವಮ್ಮ ॥ ೯ ॥

ಜಾರೆಯರಾದರೆಂದು—ನಮ್ಮವರೆಲ್ಲ ।
ಸಾರಿ ಕೈಬಿಟ್ಟರಮ್ಮ ॥
ವಾರಿಜಾಕ್ಷನು ಬರಿ ದೂರಿಗೆ ಗುರಿಮಾಡಿ ।
ದಾರಿ ತೋರದೆ ಪೋದನಾರ ಸೇರುವೆವಮ್ಮ ॥ ೧೦ ॥

ಬೆರೆವುದಿನ್ನೆಂದು ನಾವು—ಶ್ರೀಹರಿ ಸಂಗ ।
ದೊರೆವುದಿನ್ನೆಂದಿಗಮ್ಮ ॥
ಕರುಣಾಕರ ನಮ್ಮ ಪುರಂದರವಿಠಲನು ।
ಕರೆದುಕೊಳ್ಳದೆ ನಮ್ಮ ತೊರೆದು ಪೋದ ಮೇಲೆ ॥ ೧೧ ॥

## ೧೦೩

ರಾಗ—ಮೋಹನ ತಾಳ—ಝಂಪೆ

೧ ಏಕೆ ವೃಂದಾವನವು ಸಾಕು ಗೋಕುಲವಾಸ ।
ಏಕೆ ಬಂದೆಯೊ ಉದ್ಧವಾ ? ॥ ಪ ॥

ಸಾಕು ಸ್ನೇಹದ ಮಾತನೇಕಮುಹಿಮನು ತಾನು ।
ಆ ಕುಬುಜೆಯನು ಕೂಡಿದ—ಉದ್ಧವಾ ॥ ಅ. ಪ ॥

ಬಿಲ್ಲು ಬಿಳಿಯಯ್ಯನ ಜೋಟಿ ನಗೆನುಡಿ ನೋಟ ।
ಇಲ್ಲದಂತಾಯಿತಲ್ಲ ॥

೧ ಓ ಪ್ರತಿಯಿಂದ ಆರಿಸಿಕೊಂಡಿದೆ.

ಎಲ್ಲರಿಂದಗಲಿಸಿದ ಕ್ರೂರ ಅಕ್ರೂರನವ ।
ವಲ್ಲಭನ ಒಯ್ದನಲ್ಲ ॥
ಮಲ್ಲರನು ಮರ್ದಿಸುತ ಮಾವ ಕಂಸನ ಕೊಂದ ।
ಫುಲ್ಲನಾಭನ ತಂದು ತೋರ್ಸೈ—ಉದ್ಧವಾ ॥ ೧ ॥

ಅನುದಿನೊಳಾದರಿಸಿ ಅಧರಾಮೃತವನಿತ್ತು ।
ಇನಿದಾದ ಮಾತುಗಳಲಿ ॥
ಮನದ ಮರ್ಮವ ತಿಳಿದ ಮನಸಿಜಪಿತನ ಸಖವು ।
ಮನಸಿಜನ ಕೇಳಿಯಲ್ಲಿ ॥
ಕನಸಿನಲಿ ಕಂಡ ತೆರನಾಯಿತಾತನ ಕಾಂಬು- ।
ವನಕ ಬದುಕುವ ಭರವಸೆ ಹೇಳು—ಉದ್ಧವಾ ॥ ೨ ॥

ಕರುಣಾನಿಧಿಯೆಂಬುವರು ಕಪಟನಾಟಕದರಸು ।
ಸರಸ ವಿರಸವ ಮಾಡಿದ ॥
ಸ್ಮರಿಸಿದವರನು ಕಾಯ್ವ ಬಿರುದುಳ್ಳ ಸಿರಿರಮಣ ।
ಮರೆದು ಮಧುರೆಯ ಸೇರಿದ ॥
ಪರಮಭಕ್ತರ ಪ್ರಿಯ ಪುರಂದರವಿಟ್ಠಲನ ।
ನೆರೆಗೂಡಿಸೈ ಕೋವಿದ—ಉದ್ಧವಾ ॥ ೩ ॥

## ೯. ವಿವಿಧ ಭಾವಲೀಲೆ

### ೧೦೩

ರಾಗ—ಮೋಹನ ತಾಳ—ಆದಿ

೧ ಮರೆತೆಯೇನೋ ರಂಗ—ಮಂಗಳಾಂಗ ॥ ಪ ॥

೧ ಓ ಪ್ರತಿಯೊಂದರಲ್ಲಿಯೆ ಸಿಕ್ಕುತ್ತಿದೆ.

ಕೋಲು ಕೈಯಲಿ ಕೊಳಲು, ಜೋಲುಗಂಬಳಿ ಹೆಗಲ ।
ಮೇಲೆ ಕಲ್ಲಿಯ ಚೀಲ ಕಂಕುಳಲಿ ॥
ಕಾಲಿಗೆ ಕಡಗವು ಕಾಯುತ ಹಸು ಹಿಂಡ ।
ಬಾಲಕರ ಮೇಳದಿ ಇದ್ದೆಯೊ ರಂಗ ॥ ೧ ॥

ಕಲ್ಲುಮಣಿ ಕವಡಿ ಚೆನ್ನ ಗುಳ್ಳೆಗುಂಜಿ ಒಡವೆ ।
ಎಲ್ಲವು ನಿನ್ನ ಸರ್ವಾಂಗದಲಿ ॥
ಅಲ್ಲಲ್ಲಿಗಳವಟ್ಟು ನವಿಲುಗರಿಯ ದಂಡೆ ।
ಗೊಲ್ಲ ಮಕ್ಕಳ ಕೂಡೆ ಸಲ್ಲಾಪವಾಡುತೆ ॥ ೨ ॥

ಸಿರಿದೇವಿ ಬಂದು ಸೇರಿದ ಬಳಿಕ ಲೋಕದೊಳಗೆ ।
ಸಿರಿಯರಸನೆಂಬುವರು ॥
ವರಮುಖ್ಯಪ್ರಾಣವಂದಿತ ಉಡುಪಿಯ ।
ಸಿರಿ ಪುರಂದರವಿಠಲ ಶ್ರೀಕೃಷ್ಣ ॥ ೩ ॥

## ೧೦೪

ರಾಗ—ಕೇದಾರಗೌಳ ತಾಳ—ಅಟ

೧ ಕೊಟ್ಟ ಸಾಲ ಕೊಡದೆ ಭಂಡಾಟ ಮಾಡುತಿಹನೆ ।
ಎಷ್ಟು ಕೇಳಿದರಿನಗೆ ಓಯೆನ್ನದಿಹನೆ ॥ ಪ ॥

ಭರದಿ ಕೇಳಲು ಜಲದಿ ಕಣ್ಣು ಬಿಡುತಿಹನೆ ।
ತರುಬಿ ಕೇಳಲು ಕಲ್ಲು ಹೊತ್ತು ನಿಂತಿಹನೆ ॥
ಮರಳಿ ಕೇಳಲು ಊರ ಅಡವಿ ಸೇರುವನೆ ।
ಇರುಳು ಹಗಲೆಲ್ಲ ಕಾಣಿಸಿಕೊಳ್ಳದಿಹನೆ ॥ ೧ ॥

---

೮. ಇ ಪ್ರತಿಯಿಂದ ತೆಗೆದುಕೊಂಡಿದೆ.

ಕಂಡು ನಿಲ್ಲಿಸಲೊಂದು ಕಾಲಲಿ ನಿಲುವನೆ ।
ಕೊಂಡ ಸಾಲಕೆ ಕೊಡಲಿ ಪಿಡಿದು ನಿಲ್ಲುವನೆ ॥
ಉಂಡರಾಣೆಯೆಂದು ಉಪವಾಸವಿರುವನೆ ।
ಬಂಡನಂದದಿ ಠಕ್ಕುಟೌಳಿ ನಡಿಸುವನೆ ॥ ೨ ॥

ಕೆಟ್ಟಬಯಲುಲಜ್ಜೆ ಹೇವ ತೊರೆಯುವನೆ ।
ಕೊಟ್ಟು ಪೋಗೆನ್ನಲು ಕಲಿಯು ಆಗುವನೆ ॥
ಸೃಷ್ಟಿಗೊಡೆಯ ಶ್ರೀರಂಗಪಟ್ಟಣದ ಪುರಂದರ ।
ವಿಟ್ಠಲೇಶನು ನಮ್ಮ ಪಶ್ಚಿಮರಂಗನಾಥನು ॥ ೩ ॥

## ೧೦೫

ರಾಗ—ಶಂಕರಾಭರಣ ತಾಳ—ಅಟ

ಎಂಥವನೆಂಥವನೆ ರಂಗಯ್ಯ ।
ಎಂಥವನೆಂಥವನೆ ? ॥ ಪ ॥

ಆಗಮವನು ತಂದವನೆ—ರಂಗ ।
ಬೇಗದಿ ಗಿರಿಯ ಪೊತ್ತವನೆ ॥
ಮೂಗಿಂದ ಭೂಮಿಯನೆತ್ತಿದನೆ—ಶಿಶು ।
ಕೂಗಲು ಕಂಭದಿಂದೊದಗಿದನೆ ॥ ೧ ॥

ಧರಣಿಯ ಈರಡಿ ಮಾಡಿದನೆ—ಭೂ- ।
ಸುರನಾಗಿ ಪರಶುವ ಧರಿಸಿದನೆ ॥
ಭರದಿ ಕೋಡಗ ಹಿಂಡ ಕೂಡಿದನೆ—ಫಣಿಯ ।
ಶಿರದಲಿ ಕುಣಿಕುಣಿದಾಡಿದನೆ ॥ ೨ ॥

---

೧ ಓ ಪ್ರತಿಯಿಂದ ತೆಗೆದುಕೊಂಡಿದೆ.

ಉಟ್ಟಿದ್ದ ಬಟ್ಟೆಯ ಬಿಸುಟಿಹನೆ ರಂಗ ।
ದಿಟ್ಟ ತೇಜಿಯನೇರಿ ಮೆರೆಯುವನೆ ॥
ದುಷ್ಟರನೆಲ್ಲ ಸಂಹರಿಸಿದನೆ—ನಮ್ಮ ।
ದಿಟ್ಟ ಪುರಂದರವಿಟ್ಠಲನೆ ॥ ೩ ॥

## ೧೦೬

ರಾಗ—ಯದುಕುಲಕಾಂಬೋದಿ  ತಾಳ—ತ್ರಿಪುಟ

೧ ಇವಗೇಕೆ ಪರಿಮಳ ಇವಗೇಕೆ ಶೃಂಗಾರ ।
ನವನೀತ ಚೋರ ನಾರುವ ಗೊಲ್ಲಗೆ ॥ ಪ ॥

ಹೊಲಸು ಮೈಯವಗೇಕೆ ಹೊಸ ಕಸ್ತೂರಿಯ ಲೇಪ ।
ತಲೆದೋರದವಗೇಕೆ ದಟ್ಟ ಪುನುಗು ।
ಬಲು ಕೇಶದವಗೇಕೆ ಬಾವನ್ನದ ಲೇಪ ।
ಸಲೆಘೋರರೂಪಿಗೇಕೆ ನೊಸಲ ಸಾದು ॥ ೧ ॥

ತುಲಸಿಮಾಲೆಯ ಧರಿಸಿದವಗೇಕೆ ಜವ್ವಾಜಿ ।
ಕೊಲೆಗಡುಕಗೇಕೆ ಕುಂಕುಮತಿಲಕ ॥
ಅಲೆದಾಡುವವಗೇಕೆ ಅಂಗರಾಗದ ಸುಖ ।
ಕಳವು ಮಾಡುವವಗೇಕನಂಗ ಸೊಬಗು ॥ ೨ ॥

ಪರಸತಿಯ ಬಯಸುವಗೆ ಪನ್ನಗಶಯನವೇಕೆ ।
ಹರಿದಾಡುವನಿಗೇಕೆ ಅಡಪ-ಡವಿಕೆ ॥
ಸಿರಿದೇವಿ ಶೃಂಗಾರಗೈದು ಮರಿಸಿದ ಬಳಿಕ ।
ಧರೆಗಧಿಕನಾದನೀ ಪುರಂದರವಿಠಲ ॥ ೩ ॥

೧ ಈ ಪ್ರತಿಯೊಂದರಲ್ಲಿ ಸಿಕ್ಕುತ್ತಿದೆ.

## ೧೦೭

### ಸುಳಾದಿ

#### ಧ್ರುವತಾಳ

೧ ಕಡಗ ಕಂಕಣ ಕಟಿಯು ತೊಡರ ಸಮುಚರಣದ ।
ಹೇಮವರ್ಣ ಶ್ಯಾಮ ಕೋಮಲಾಂಗ ।
ಆಹೋ ಗೋಪಿಯರ ಮೋಹಿಸುತ್ತಿದೆ ।
ಆಹೋ ಜಗಜ್ಜನರ ಪಾಲಿಸುತ್ತಿದೆ ।
ಪುರಂದರವಿಟ್ಠಲನ ಬಾಲಲೀಲೆ ॥ ೧ ॥

#### ಮಟ್ಟಿತಾಳ

ಪೊಂಬಟ್ಟೆಯ ಮೇಲೆ ಕಾಂಚಿಯ ದಾಮ ಗುಡಿಗಟ್ಟಿ ।
ಜಂಬು-ಚೂತದೆಳದಳಿರುಗಳ ಮುಕುಟ ಮೇಲೆ ಕಟ್ಟಿ ।
ಕೊಂಬು ಕೊಳಲು ತುತ್ತೂರಿ ಮೌರ್ಯಗಳು ।
ಭುಂ ಭುಂ ಭುಂ ಭುಂ ಝುಂ ಝುಂ ಝುಂ ಝುಂ ।
ಎಂಬ ರಾಮಕೃಷ್ಣ ಗೋಪರುಗಳ ।
ಸಂಭ್ರಮ ಸುರರ ಸೋಲಿಸಿತು ಜಂಭಭೇದಿ ಸ್ವ- ।
ಯಂಭುವ ಮುಖ್ಯ ಸುರವಂದಿತ ತಿರು- ।
ವೆಂಗಳಪ್ಪ ಪುರಂದರವಿಠಲರಾಯ ॥ ೨ ॥

#### ತ್ರಿವುಡೆತಾಳ

ಜಯಜಯ ಸಿರಿನಾರಸಿಂಹ ದುರಿತಭಯ ನಿವಾರಣ ।
ಜಯಜಯ ಸಿರಿದಿವ್ಯಸಿಂಹ ಪುರಂದರವಿಟ್ಠಲರಾಯ ॥ ೩ ॥

---

೧ ೩ ( ಮುದ್ರಿತ ), ೪ ಪ್ರತಿಗಳಿಂದ ಆರಿಸಿಕೊಂಡಿದೆ.

ಅಟತಾಳ

ಅಹಂಕಾರ ಮಮಕಾರವಳಿಯದೆ ।
ವಿಹಂಗಗಮನ ಸಿಕ್ಕುವನೆ ಮರುಳೆ ? ।
ಕಾಮಕ್ರೋಧವ ಬಿಡದನಕ ।
ಪುರಂದರವಿಟ್ಠಲನು ಸುಲಭನೆ ಮರುಳೆ ? ।

ಆದಿತಾಳ

ವಾಮನ ವಾಸುದೇವ ಪದುಮನಾಭ ಹರಿ ।
ದಾಮೋದರ ನರಹರಿ ಮಾಧವ ಸಿರಿಧರ ।
ನಾರಾಯಣ ಹರಿ ಸಿರಿವತ್ಸಾಂಕಿತ ।
ವಾರಿಜದಳಲೋಚನ ಭೂರಮಣ ।
ಅಚ್ಯುತಾನಂತ ಗೋವಿಂದ ಮುಕುಂದ ಪುರು- ।
ಷೋತ್ತಮ ಶ್ರೀಹರಿ ನಾರಾಯಣ ।
ಪ್ರದ್ಯುಮ್ನ ಸಂಕರುಷಣದೇವ ಅನಿ- ।
ರುದ್ಧ ಪುರಂದರವಿಠಲ ಸರ್ವೋತ್ತಮ ॥ ೫ ॥

ಜತೆ

ಕಾಯಕರಣಗಳಿಂದ ಜೀಯ ಕಾಯಬೇಕೆನ್ನ ।
ಕಾಯ್ದುಕೊಳ್ಳೊ ಪುರಂದರವಿಠಲ ನೀಯೆನ್ನ
ಕಾಯ್ದುಕೊಳ್ಳೆನ್ನ ॥

## ೧೦೮

### ಸುಳಾದಿ

### ಧ್ರುವತಾಳ

೧ ಕೆಲವರು ಕೆಂದಾವರೆ ಹಾಸಿ ಪವಡಿಸೆನೆ ಪವಡಿಸುವೆ ।
ಕೆಲವರುಪಬರ್ಹಣವ ಈಯಲು ನೀನಾನುವೆಯೊ ।
ಕೆಲವರು ಕೇತಕಿ ಚಾಮರ ಬೀಸಲು ನೀನಲಿವೆ ।
ಕೆಲವರು ಪಾದಪದುಮಗಳ ಒತ್ತಲು ನೀನೊಲಿವೆ ।
ಕೆಲವರು ತೋಳ್ತೊಡೆ ವೈಮೊಗವೆಂಸಿ ಅಪ್ಪಲು ಮರಳಿ
ಅಪ್ಪುವೆ ।
ಕೆಲವರು ಕೊಂಬು ಕೊಳಲು ತುತ್ತೂರಿ ವೌರ್ಯಗಳ ಬಾರಿಸೆ
ನೀನೊಲಿವೆ ।
ಕೆಲವರು ಮಂದ್ರ ಮಧ್ಯಮ ತಾರದಿ ಅನೇಕ ರಾಗಗಳ ಪಾಡೆ ।
ಝುಣ ಝುಣ ಝುಣರೆಂದುಗ್ಗಡಿಸೆ ಕೆಲವರು ।
ಧಿಮ್ ಧಿಮ್ ಧಿಮ್‌ಧಿಮಿಕೆನುತಲಿ ಕೆಲವರು ನೃತ್ಯವಾಡೆ
ಸುಖಿಸುವೆ ।
ಜಲಜಾಕ್ಷ ಏನಿನ್ನಿವರ ಪುಣ್ಯವೆಂತು ಬಣ್ಣಿಪೆ ।
ಹಲಧರನು ನಿನ್ನೊಡನೆ ನಿನ್ನೊಳಾಡುವ ಗೋಪ ಗೋಪಿ ಗೋ- ।
ಗೋಕುಲಕೆ ನಮೋ ಪುರಂದರಪುರಲ ॥ ೧ ॥

### ಮಟ್ಟಿತಾಳ

ನಖದ ಬೆಳಕು ಚಂದ್ರ-ಸೂರ್ಯರ ಸೋಲಿಸಿ ಮೆರೆಯುತಿದೆ
ನೋಡು ।
ಮುಖದಧಿಪತಿಯೆ ನಿನ್ನ ಸರ್ವಾಂಗದ ಕಾಂತಿ
ಲಾವಣ್ಯಗಳನೆ ಕಂಡು ।

---

೧ ಇ ( ಮುದ್ರಿತ ) ಪ್ರತಿಯೊಂದರಲ್ಲಿಯೆ ಸಿಕ್ಕಿದೆ.

ಸುಖಿಸಿದರಂತವರು ನಿನ್ನೊಡನೆ ಇದ ।
ನಿಖಿಳ ಜಗತ್ಕಾರಣ ನೀನೆ ಬಲ್ಲೆ ।
ಮಕರಕುಂಡಲಾಭರಣವೆಸೆಯೆ ।
ವಿಖನಸಾರ್ಚಿತ ಶ್ರೀಪುರಂದರವಿಠಲರಾಯ ॥ ೨ ॥

ತ್ರಿವುಡೆತಾಳ

ರತ್ನಮುಕುಟವು ರತ್ನಮುಕುಟದಂತೆ ।
ರತ್ನಮುಕುಟಕೆ ತುಂಬಿಯೆರಗಲು ।
ಕತ್ತಾವರೆ ವೀರೆಯು ದಂಡೆ ಮೆರೆಯೆ ।
ಪೀತಾಂಬರ ಕಾಂಚೀದಾಮಾದಿ ಶೋಭಿತ ।
ಚಿತ್ತವಲ್ಲಭ ಪುರಂದರವಿಟ್ಠಲನೊಳು ।
ಉತ್ತರೋತ್ತರದ ಶೃಂಗಾರವವ್ವ ॥ ೩ ॥

ಅಟತಾಳ

ಅನಂತವೇದಸಮೂಹಗಳಿಂದಲಿ ।
ಅಜಾದಿಸುರರು ಅರಸಲೀತಕ್ಕಿನ್ನು ? ।
ಆ ನಂದ ಯಶೋದೆಯರ ಮನೆಯಲ್ಲಿ ।
ವೃಂದಾವನದಿ ಕಾಣಿಸಿಕೊಂಡನವ್ವ ।
ನಂದ-ನಂದನ ಕಂದ ಪುರಂದರವಿಟ್ಠಲ ।
ಪರದೇವತೆ ಈತನಲ್ಲವೇನವ್ವ ! ॥ ೪ ॥

ಆದಿತಾಳ

ಬೆಣ್ಣೆಯ ಬಟ್ಟಲ ಕಂಡು ಒರಳ ಮೇಲೇರಿಕೊಂಡು ।
ಚಿಣ್ಣರಿಗೆ ತುತ್ತೀವ ಠಕ್ಕುತನವೇನೆಂದು ।
ಕಣ್ಣ ಝೇಂಕರಿಸುತ್ತ ಕಂಜಾಕ್ಷ ಎಂದು ಗೋಪಿ ।
ಬೆಣ್ಣೆಯ ಕೊಂಡಟ್ಟಿದಳಪ್ರತಿಮಪ್ರಭಾವನ ।
ಬೆಣ್ಣೇನು ಸೋಂತಳು ಪುರಂದರವಿಠಲನ ।
ಬೆಣ್ಣೆಯಲ್ಲಿ ಕಟ್ಟಿ [illegible] ವಿಶ್ವಕಾಯನ ॥ ೫ ॥

ಜತೆ

ನಂದ ದಾಮವ ಬಿಟ್ಟು ಕಂದನ ಬಿಗಿದಪ್ಪಿ ।
ಅಂದು ವಂದಿಸಿದನು ಪುರಂದರವಿಠಲನ ॥

## ೧೦೯

ಸುಳಾದಿ

ಧ್ರುವತಾಳ

೧ ರತಿಪತಿಪಿತನೆಂತೆಂಬ ಚೆಲುವ ನೀನುಳಿದು ।
ಕ್ಷಿತಿಯಲಿ ವರಾಹರೂಪ ಧರಿಸುವರೇನೊ ಹರಿಯೆ ।
ಸಿರಿ-ಭೂದೇವಿಯರು ಸತಿಯರಾಗಿರಲು ।
ಅಡವಿಯೊಡಾಳುವ ಕರಡಿಯ ಮಗಳನು ಮೆಚ್ಚುವರೆ? ।
ಪುರಾಣಪುರುಷೋತ್ತಮನೆ ನೀನಮೃತಕೆ ।
ನಾರಾಯಣಿಯಾಗಿ ಮೋಹಿಪರೆ? ।
ಜಗಕಾಶ್ಚರ್ಯ ಚಾರಿತ್ರ್ಯವುಂಟೆ, ಎಲೆ ದೇವ ।
ಪುರಂದರವಿಠಲ ದೇವರದೇವ ।
ಶರಣಾಭರಣವೆ ನಿನಗೆ ನಾನು ನಮೋ ಎಂಬೆ ॥ ೧ ॥

ಮಟ್ಟತಾಳ

ಜ್ಞಾನ ಭಕುತಿ ಏನು ಇಲ್ಲದ ಹೀನನಾದ ಕಾರಣ ।
ನಾನು ನನ್ನದೆಂಬ ಹಮ್ಮು ಮಮತೆಗಳು ।
ಏನ ಮಾಡಲು ಬೆನ್ನ ಬಿಡವು ।
ನೀನೇ ಸ್ವತಂತ್ರನು ನಿನ್ನ ದಾಸನು ನಾನು ।
ಎನಿಸೆನು ಪುರಂದರವಿಠಲ ॥ ೨ ॥

---

೧ ಇ (ಮುದ್ರಿತ) ಎ–ವ ಪ್ರತಿಗಳಿಂದ ಆರಿಸಿದೆ.

### ತ್ರಿವಿಡೆ

ನಾನೊಬ್ಬನೆ ನಿನ್ನ ದಾಸನಾದೆನು ದೇವ |
ನೀನೊಬ್ಬನೆ ಎನ್ನ ಸ್ವಾಮಿಯಾದೆಯೊ ದೇವ |
ಏನೆಂದಾಡುವೆ ಅಳವಡುವೆ ಪಾಡುವೆ |
ದೀನನೆನ್ನುತ ಕಾಯೊ ಹೊದ್ದಿದೆನು ನಿನ್ನ |
ಮಾಣೊ ಛಲವ ಪುರಂದರವಿಠಲ || ೩ ||

### ಅಟತಾಳ

ಬಿಲ್ಲು ಮುರಿಯೊ ದನುಜರ ಹೊಯ್ಯೊ, ಕೃಷ್ಣ |
ಮಲ್ಲ ಬಂದನು ಕಾಣೊ ಮಧುರಿಗೆ |
ಹುಲ್ಲುಮಲ್ಲರ ತಿವಿಯೊ |
ಖುಲ್ಲ ಮಾನವರ ಕೊಲ್ಲೊ, ರಂಗ |
ಮಲ್ಲ ಬಂದನು ಕಾಣೊ ಮಧುರಿಗೆ |
ಬಲ್ಲಿದ ನಮ್ಮ ಪುರಂದರವಿಠಲ |
ಬಲ್ಲಿದ ಕಾಣೊ, ಊರ್ಜಿತ ಕಾಣೊ ಮಲ್ಲ ಕೃಷ್ಣ || ೪ ||

### ಏಕತಾಳ

ಗಜವನಟ್ಟಿ ರಜಕರ ಮುರಿದೊಟ್ಟಿ !
ಮಾವನ ಮುಡಿಯುಟ್ಟು ಕುಬುಜೆ ತಂದ ದಿವ್ಯ |
ಗಂಧವ ಪೂಸಿ ದಾಮ-ಸುದಾಮರ ಪೂಗಳ ಮುಡಿದು |
ಮಾವನ ಮಡುಹಿದ ಪುರಂದರವಿಠಲ |
ಬಿಡದೆ ಎನ್ನ ಮನದಲಿ || ೫ ||

### ಜತೆ

ಜ್ಞಾನಂ ದೇಹಿ ಭಕುತಿ ವಿರಕುತಿ— ಅ· |
ಸನ್ಮಾನಂ ದೇಹಿ ಪುರಂದರವಿಠಲ ||

ರಾಗ—ಭೈರವಿ ತಾಳ—ಝಂಪೆ

೧ ಜಯಮಂಗಳಂ ನಿತ್ಯ ಶುಭಮಂಗಳಂ ||

ಶ್ರೀವತ್ಸಲಾಂಛನಗೆ ಕ್ಷೀರಾಬ್ಧಿವಾಸಗೆ |
ಗೋವರ್ಧನೋದ್ಧಾರ ಗೋವಿಂದಗೆ ||
ಮಾವ ಕಂಸನ ಕೊಂದು ಮಕರಕುಂಡಲ ಧರಿಸಿ |
ಜೀವಾತ್ಮನಾದ ಚಿನ್ಮಯರೂಪಗೆ || ೧ ||

ಅಂಬುಧಿಯ ಶಯನಗೆ ಅಖಿಲಭೂತೇಶಗೆ |
ತುಂಬುರು-ನಾರದ ಮುನಿವಂದ್ಯಗೆ ||
ಎಂಬತ್ತುನಾಲ್ಕು ಲಕ್ಷ ಯೋನಿಗಳ ರಾಶಿಯನು |
ಗೊಂಬೆಯನು ಮಾಡಿ ಕುಣಿಸುವ ದೇವಗೆ || ೨ ||

ಕಂದರ್ಪನಯ್ಯನಿಗೆ ಕೋಟಿಲಾವಣ್ಯನಿಗೆ |
ಸುಂದರ ಮೂರುತಿ ಹರಿಸರ್ವೋತ್ತಮನಿಗೆ ||
ಕಂದ ಪ್ರಹ್ಲಾದನ ಕಾಯ್ದ ದೇವನಿಗೆ ಅರ |
.................................... || ೩ ||

ಪನ್ನಂಗಶಯನಗೆ ಪಾವನ್ನಚರಿತಗೆ |
ಸನ್ನುತರಾದ ಸಜ್ಜನ ಪಾಲಗೆ ||
ಎನ್ನೊಡೆಯ ಸಿರಿದೇವಿಯರಸು ಮುದ್ದುರಂಗಗೆ |
ತನ್ನ ನಂಬಿದವರನು ಸಲಹುವವಗೆ || ೪ ||

ಕರಿರಾಜವರದಗೆ ಕರುಣಾಸಮುದ್ರಗೆ |
ಗರುಡಗಮನನಿಗೆ ವೈಭವಹಾರಗೆ ||
ವರಪುರಂದರವಿಠಲ ಕಂಬುಕಂದರನಿಗೆ |
ಅರವಿಂದನಾಭನಿಗೆ ಅಜನ ಪಿತಗೆ || ೫ ||

---

೧ ಆ (ಬಿಡಿ ೧) ಪ್ರತಿಯಲ್ಲಿ ಮಾತ್ರ ಸಿಕ್ಕಿದೆ.

# ಪರಿಶಿಷ್ಟ ೧

## ೧ ಗೋಕುಲಭಾಗ್ಯ

ಕನ್ನಡ ಹರಿದಾಸರು ಸ್ವಗತಭೇದವಿವರ್ಜಿತ ಶ್ರೀಹರಿಯ ಉಪಾಸಕರು; ಆದರೂ ಅವರು ಶ್ರೀವಿಟ್ಠಲನ ಭಕ್ತರಾದುದರಿಂದ, ತಮ್ಮ ಉಪಾಸನೆಗೆ ಪ್ರಾಮುಖ್ಯ ವಾಗಿ ಶ್ರೀಕೃಷ್ಣನನ್ನೇ ಸ್ವೀಕರಿಸಿದ್ದಾರೆ. ದಾಸರು ದಶಾವತಾರದ ಎಲ್ಲ ಮಹಿಮೆ ಗಳನ್ನು ಹೇಳಿರುವರಾದರೂ, ಶ್ರೀಕೃಷ್ಣನ ಮಹಿಮೆಯನ್ನು ಹೇಳುವಾಗ ಅದೊಂದು ವಿಲಕ್ಷಣ ಭಾವನಾಪರವಶರಾದುದು ಕಂಡುಬರುತ್ತದೆ. ಶ್ರೀಕೃಷ್ಣನು ಪೂರ್ಣಾ ವತಾರಿ. ಅವನ ಲೀಲೆಗಳು ಅನಂತವಾಗಿವೆ. ಈ ಅವತಾರದಲ್ಲಿ ಅಸುರರನ್ನು ನಿಗ್ರ ಹಿಸಿದಷ್ಟು ಬೇರೆ ಯಾವ ಅವತಾರದಲ್ಲಿಯೂ ನಿಗ್ರಹಿಸಿದುದು ಕಾಣುವುದಿಲ್ಲ. ಅಲ್ಲದೆ ಶ್ರೀಕೃಷ್ಣನ ಬಾಲಲೀಲೆ, ಗೋಪಿಕಾವಿನೋದ, ವೇಣುವಿನೋದ ಮುಂತಾದ ರಸ ನಿರ್ಮಿತಿಗೆ ಸಾಕಷ್ಟು ವಸ್ತುಗಳನ್ನು ಒದಗಿಸಿಕೊಡುವುದು. ಇನ್ನೊಂದು ಮಾತೆಂದರೆ ವಿಟ್ಠಲ, ವೆಂಕಟೇಶ ಇವೆಲ್ಲ ಶ್ರೀಕೃಷ್ಣನವೇ ರೂಪವೆಂದು ಪುರಾಣಗಳಲ್ಲಿ ಹೇಳ ಲಾಗಿದೆ. ಆದುದರಿಂದಲೇ ಪುರಂದರದಾಸರು ಕೃಷ್ಣಲೀಲೆಯ ಬಗೆಗೆ ಅನೇಕ ಕೀರ್ತನೆಗಳನ್ನು ರಚಿಸಿದ್ದಾರೆ. ನಮಗೆ ಇಲ್ಲಿ ದೊರೆತಿರುವುದಕ್ಕಿಂತ ಇನ್ನೂ ಎಷ್ಟೋ ಹೆಚ್ಚಾಗಿ ಅವರು ಕೀರ್ತನೆ-ಸುಳಾದಿಗಳನ್ನು ರಚಿಸಿರಬಹುದಾಗಿದೆ. ಆದರೆ ಅವೆಲ್ಲ ಸಿಕ್ಕುವುದು ಎಂತಹ ಮಾತೊ. ಹೆಚ್ಚಿನ ಸಂಶೋಧನ ನಡೆದರೆ ಕೃಷ್ಣಲೀಲೆಯ ಕೃತಿಗಳು ಇನ್ನೂ ಸಿಕ್ಕಬಹುದಾಗಿದೆ! ಶ್ರೀಕೃಷ್ಣಲೀಲೆಗೆ ಸಂಬಂಧಿಸಿದ ದಾಸರ ಸಾಹಿತ್ಯದಲ್ಲಿ ಕಂಡುಬರುವ ಒಂದು ವಿಶೇಷ ಸಂಗತಿಯೆಂದರೆ, ರಾಧಾಪ್ರೇಮದ ಅಭಾವ. ರಾಧೆಯ ಹೆಸರನ್ನು ದಾಸರು ಎಲ್ಲಿಯೂ ಹೇಳಿಲ್ಲ.

### ೧ನೆಯ ಹಾಡು

ಈ ಹಾಡಿನಲ್ಲಿ—ಬಲರಾಮ-ಕೃಷ್ಣರು ಮನೆಗೆ ಬಂದಿದ್ದಾರೆ. ಬಾಗಿಲ ತೆರೆಯಿರಿ ಎಂಬ ಬಗೆಯನ್ನು ಪರಿಪೋಷಿಸಲಾಗಿದೆ. ಕೃಷ್ಣಲೀಲೆಗೆ ಈ ಕೀರ್ತನೆಯನ್ನು ನಾವು ಮಂಗಲಾಚರಣದಂತೆ ಬಳಸಿಕೊಂಡಿದ್ದೇವೆ.

೧ **ಮಕರಕುಂಡಲ** ಮೊಸಳೆಯಾಕಾರದ ಕುಂಡಲ.

**ನೀಲಮುತ್ತು**-ನೀಲಿ ಬಣ್ಣ ಮುತ್ತುಗಳು.

**ಸುಖ**=ಆನಂದ.

೨ **ತುರುಬಿ**=ಧರಿಸಿಕೊಂಡು.

**ಮಿಂಡೆ**=ಹರಯದ ಹೆಂಗಸು.

**ಭಂಡು**=ಚೇಷ್ಟೆಯಿಂದ ಸಾಕುಸಾಕೆನಿಸುವುದು.

೩ **ಪೊಕ್ಕುಳಲ್ಲಿ ... ದೇವದೇವನು.** (ಭಾಗ ೩–೮ ಭಾರತ. ಆದಿ ೧).

**ಚಿಕ್ಕ ಉಂಗುಟದಿ.... ನಾತನು.** ( ಭಾಗ ೩–೧೭ ).

## ೨ನೆಯ ಹಾಡು

ಈ ಹಾಡಿನಲ್ಲಿ, ಮಾತೆ ಯಶೋದೆಯ ಮಹದ್ಭಾಗ್ಯವನ್ನು ಕುರಿತು ದಾಸರು ವಿವಿಧ ಉದಾರಣೆಗಳೊಂದಿಗೆ ವಿವರಿಸಿದ್ದಾರೆ.

೧ **ಗೋಪಿ**=ಯಶೋದೆ.

**ತೋಳಂಬಲಿ** = ಬಳ್ಳಿಯಂತಿರುವ ತೋಳುಗಳಿಂದ ( ತೋಳ್ + ಹಂಬಲಿ ).

೨ **ವಿಧಿಜನಕ**=ಬ್ರಹ್ಮನ ತಂದೆ ( ಶ್ರೀಹರಿ ).

**ತಕ್ಕೈಸು**=ಅಪ್ಪಿಕೊಳ್ಳು.

೫ **ಅಂಗಜಪಿತ**=ಕಾಮನ ತಂದೆ.

**ಬಿಂದುಲಿ**=ಮಕ್ಕಳ ಮುಂಗೈಯಲ್ಲಿ ಇಡುವ ಚಿನ್ನದ ಆಭರಣ.

೭ **ಉಪ್ಪು-ಬೇವುಗಳ ನಿವಾಳಿಸಿ**=ದೃಷ್ಟಿತೆಗೆದು ( ಇದರಲ್ಲಿ ಬೇರೆ ಬೇರೆ ವಿಧಾನಗಳಿವೆ. )

೭ **ಗುಮ್ಮ**=ಬಾವಾ.

೮ **ಏಸೊ ಬೊಮ್ಮಾಂಡವ.... ಇರಿಸಿದ**=ಅನೇಕ ಬ್ರಹ್ಮಾಂಡಗಳನ್ನು ಹೊಟ್ಟೆಯೊಳಗೆ ಇರಿಸಿಕೊಂಡ.

**ರಾಶಿದೈವ**=ದೇವರು-ದಿಂಡರು.

ವಿ. ಸೂ. :— ನುಡಿ ೨–೫ ಮತ್ತು ೮ ನುಡಿಗಳಲ್ಲಿ ವಿರೋಧಾಭಾಸ ಅಲಂಕಾರ ವಿದೆ.

## ೩ನೆಯ ಹಾಡು

೧ **ವಟದೆಲೆಯ.........ಪೀರುವನ**=( ವಿಷ್ಣು ಪುರಾಣ ).

ತ್ವಂ ಸಂಭೃತೋಮೇ ಜಠರೇಣ ನಾಥ ।
ಕಥಂನು ಯಸ್ಯೋದರ ಏತ ನಾಸೀತ್ ॥
ವಿಶ್ವಂ ಯುಗಾಂತೇ ವಟಪತ್ರ ಏಕಃ ।
ಶೇತೇಸ್ಮ ಮಾಯಾಶಿಶುರಂಘ್ರಿಪಾನಃ ॥ ( ಭಾಗ ೩-೩೩-೮ )

೩ **ಗಣನೆಯಿಲ್ಲದನ**=ಎಣಿಕೆಗೆ ಸಿಕ್ಕದವನ. ( ಅಪ್ರಮೇಯ ).

## ೪ನೆಯ ಹಾಡು

೧ **ಜಗದುದರ** = ಜಗತ್ತೆಲ್ಲವನ್ನು ಉದರದಲ್ಲಿ ಇರಿಸಿಕೊಂಡವ. ( ಭಾ. ತಾ. ನಿ. ೧-೨ ).

**ವಸುಮತಿ**=ಭೂಮಿ.

**ಶಶಿಮುಖಿ**=ಯಶೋದೆ.

೨ **ಭೋಗಿಶಯನ**=ಶೇಷಶಾಯಿ.

**ಯೋಗನಿದ್ರೆ**=ಯುಗಾಂತ್ಯದಲ್ಲಿ ವಿಷ್ಣು ಮಾಡುವ ನಿದ್ರೆ.

೫ **ಫಣಿಪತಿ**=ಶೇಷ.

೬ **ಸಮ್ಮೋದಸಮ್ಮೋಹಕ**=ಆನಂದಸ್ವರೂಪಿಯಾದ ತಾನು (ವಿಷ್ಣು) ಜಗತ್ತನ್ನು ಮೋಹಗೊಳಿಸುವವನು.

೭ **ರಕ್ಷೆ**=ಅಂಗಾರ.

೮ **ಪ್ರಣವ**=ಓಂಕಾರ.

**ಅಣಕವಾಡುವ**=ಚೇಷ್ಟೆಮಾಡುವ.

೯ **ಕುಡಿಬೆರಳು**=ಬೆರಳತುದಿ.

೧೦ **ಬಲಿ**=( ಸಂ. ೧, ಪು. ೨೬-೨ ).

**ನೇವರಿಸು**=ಸವರಿಸು, ಓರಣಗೊಳಿಸು.

## ೫ನೆಯ ಹಾಡು

ಗೋಕುಲದಲ್ಲಿಯ ಗೋಪಿಕಾಸ್ತ್ರೀಯರು ಬಾಲಕೃಷ್ಣನನ್ನು ನೋಡಿ ಮುಗ್ಧರಾಗಿ, ಯಶೋದೆಯ ಹತ್ತಿರ ಬಂದು 'ಇವನು ನಿನ್ನ ಮಗನೆ?' ಎಂದು ಆಶ್ಚರಿಯಿಂದ ಕೇಳುತ್ತಲಿದ್ದಾರೆ.

೧ **ಚೆನ್ನಾರ**=ಅತಿ ಸುಂದರ.

**ಕೈಪ**=ಲಂಗೋಟಿ.

**ಸಟೆ**=ಸುಳ್ಳು.

## ೬ನೆಯ ಹಾಡು

ಹಾಗೆಯೆ ಗೋಪಿಕಾಸ್ತ್ರೀಯರು ಮುಂದುವರಿದು ಯಶೋದೆಯ ಪುಣ್ಯವನ್ನು ಈ ಹಾಡಿನಲ್ಲಿ ಕೊಂಡಾಡಿದ್ದಾರೆ.

೧ **ಪರಿತೋಷ**=ಸಂತೋಷ.

**ಕೈಗೂಡು**=ನೆರವೇರು.

## ೭ನೆಯ ಹಾಡು

ಈ ಹಾಡಿನಲ್ಲಿ ಯಶೋದೆ ಬಾಲಕೃಷ್ಣನನ್ನು ಪ್ರೀತಿಯಿಂದ ಲಾಲಿಸಿದ ವಿಚಾರವು ಬಂದಿದೆ.

**ಸಿರಿ**=ಸೌಂದರ್ಯ.

## ೮ನೆಯ ಹಾಡು

ಈ ಹಾಡಿನಲ್ಲಿ, ತಾಯಿ ಯಶೋದೆ ಬಾಲಕೃಷ್ಣನ ಪುಟ್ಟ ಪಾದಗಳನ್ನು ನೋಡಿ ಅವುಗಳ ಮಹಿಮೆ ಎಂತಹದೆಂಬುದನ್ನು ವಿವಿಧ ಉದಾಹರಣೆಗಳೊಂದಿಗೆ ಹಾಡಿದ್ದಾಳೆ.

೧ **ಶಕಟ**=( ಸಂ. ೧, ಪು. ೨೬೫ ).

**ಬಲಿ**=( ಸಂ. ೧, ಪು. ೨೬೨ ).

**ಜಲಧಿ**=ಗಂಗಾನದಿ. ( ಭಾಗ ೫–೧೭ ).

**ಶಿಲೆಶಾಪವಡೆದಿರಲು**=ಗೌತಮನ ಶಾಪದಿಂದ ಅಹಲ್ಯೆ ಕಲ್ಲಾಗಿ ಬಿದ್ದಿರಲು.

**ಫಲಕಾಲ**=ಶಾಪವಿಮೋಚನ ಕಾಲ.

೨ **ಕಾಳಿಂಗ**=( ಸಂ. ೧, ಪು. ೨೫೦ ).

**ಸಡಗರದಿಂದ.... ಈ ಪಾದವೆ** ( ಸಂ. ೩, ಪು. ೨೬೮ ).

**ಹೊಡೆಮಗಚು**=ಹೊರಳಿ ಬೀಳು, ಅಂಗತ್ತಲಾಗು.

## ೯ನೆಯ ಹಾಡು

ಶ್ರೀಕೃಷ್ಣನ ಬಾಲರೂಪದ ನಿತ್ಯಸಾನ್ನಿಧ್ಯದಿಂದ ಸಂತುಷ್ಟರಾದ ಗೋಪಿಯರ ಮನೋಭಾವವನ್ನು ಅರಿತು ದಾಸರು, ಅವರು ಎಂತಹ ಧನ್ಯರೊ!— ಎಂಬ ಉದ್ಗಾರ ತೆಗೆದಿದ್ದಾರೆ.

೧ **ಅನುರಾಗ**=ಪ್ರೀತಿ.

**ಕರೆ**=ಹಿಂಡು ( ಹಾಲನ್ನು ).

**ಕಳವೆ** ಬತ್ತ ( ತ್ಸ. ಕಲವಾ ).

**ಸಮ್ಮಾರ್ಜಿಸು**=ಕಸಹೊಡೆ.

೨ **ಉಯ್ಯಲೆ**=ಜೋಕಾಲಿ.

೩ **ಗೀತಪ್ರಸಂಗ**=ಗಾಯನಗೋಷ್ಠಿ.

## ೧೦ನೆಯ ಹಾಡು

ಈ ಸುಳಾದಿಯಲ್ಲಿ ದಾಸರು ಶ್ರೀಕೃಷ್ಣನ ಬಾಲರೂಪವನ್ನು ಕಂಡವರಾಗಿ, ಆ ರೂಪವು ಅಳಿಸಿ ಹೋಗದಂತೆ ಯಾವ ನೈಸರ್ಗಿಕ ವಿಕೃತಿಯೂ ಉಂಟಾಗಬಾರದೆಂದು ಬೇರೆ ಬೇರೆ ನೈಸರ್ಗಿಕ ಶಕ್ತಿಗಳಿಗೆ ಎಚ್ಚರ ಕೊಟ್ಟಿದ್ದಾರೆ.

೧ **ನೆಲಕಟ್ಟು**=ಸಮನಾದ ನೆಲ.

೨ **ಎಲ್ಲ ಬೊಮ್ಮಾಂಡವ ಕಂಡೆ**=( ಭಾಗ ೧೦-೭ ).

೩ **ಡೊಗ್ಗಾಲು**=ಊರಿದ ಮೊಳಕಾಲು.

೪ **ಹದುಳ**=ಕ್ಷೇಮ.

**ತದುಕು**=ಬಲವಾಗಿ ಹೊಡೆ.

೫ **ಆರೆನು**=ಅಸಮರ್ಥಳು.

## ೧೧ನೆಯ ಹಾಡು

೧ **ಸಿಂಪಿಯಲ್ಲಿ ಹಾಲು ಕುಡಿದು ಬೆಳೆದೆ** :

ಸವಟು ( ಚಮಚೆ ) ರೂಢಿಯಲ್ಲಿ ಬರುವುದಕ್ಕಿಂತ ಮೊದಲು ತಾಯಂದಿರು ಸಿಂಪಿನಿಂದ ತಮ್ಮ ಮಕ್ಕಳಿಗೆ ಹಾಲು ಕುಡಿಸುತ್ತಿದ್ದರು.

**ಈರೇಳು ಲೋಕವ ಮೂರಡಿ ಮಾಡಲು**=ವಾಮನಾವತಾರ.

## ೧೨ನೆಯ ಹಾಡು

ದಾಸರು ಈ ಪದ್ಯದಲ್ಲಿ ಬಾಲಕೃಷ್ಣನ ಸವಿಯಾದ ಮುದ್ದನ್ನು ಅಪೇಕ್ಷಿಸಿ ಮಾತನಾಡುತ್ತಾರೆ.

೨ **ಪೂತನಿ**=( ಸಂ. ೧, ಪು. ೨೭೫ ).

೩ **ತೊರವೆ**=( ಸಂ. ೩, ಪು. ೨೫೪ ).

## ೧೩ನೆಯ ಹಾಡು

ಚಿಕ್ಕಮಕ್ಕಳನ್ನು ತೋಳಾಟವಾಡಿಸುವುದು ನಮ್ಮಲ್ಲಿ ಎಲ್ಲೆಲ್ಲಿಯೂ ರೂಢವಾಗಿದೆ. ಯಶೋದೆ ಬಾಲಕೃಷ್ಣನನ್ನು ತೋಳಾಟವಾಡಿಸಿದ ವಿಷಯ ಈ ಹಾಡಿನಲ್ಲಿ ಬಂದಿದೆ. ( ಇದು ಈಗ 'ತೋಳಮ್ಮನ ತೋಳ' ಎಂಬ ರೂಪದಲ್ಲಿದೆ. )

೧ **ನೆಲುವು....ತಂದಿಡುವನೆ.** ( ಭಾಗ ೧೦-೮-೩೦ ).

೨ **ಕಟ್ಟದ ಕರಡಿಯು....ಎಳೆವನೆ**=ಭಾಗವತ, ಹರಿವಂಶ, ವಿಷ್ಣು ಪುರಾಣಗಳಲ್ಲಿ ಈ ಕಥೆ ಸಿಗುವುದಿಲ್ಲ.

**೩ ಅಂಬೆಗಾಲಿಲೊಂದೊರಳನೆಳೆದವನೆ**=(ಭಾಗ ೧೦-೯).

**ತುಂಬಿದ ಬಂಡಿಯ ಮುರಿಯಲೊದ್ದವನೆ** = ಶಕಟಾಸುರನನ್ನು ಒದ್ದು ಕೊಂದದ್ದು. (ಸಂ. ೧, ಪು. ೨೬೫).

**೪ ಕಾಳಕೂಟದ ವಿಷವ ಕಲಕಿದ**=( ಭಾಗ ೧೦-೧೬, ೪-೫ ).

**ಕಾಳಿಂಗನ ಹೆಡೆಯನು ತುಳಿದ**=( ಭಾಗ ೧೦-೧೫, ೫-೧೦ ).

**ಕಾಳಗದಲಿ....ಮಡುಹಿದ**=ರಾಮಾವತಾರ.

**ಶ್ಯಾಲಕವೈರಿ**=ರುಕ್ಮಿಯ ( ರುಕ್ಮಿಣಿಯ ಸಹೋದರ ) ವೈರಿ.

**೫ ವಿಕಳ**=ಚಿಂತೆ, ಕಳವಳ.

## ೧೪ನೆಯ ಹಾಡು

ಬಾಲಕೃಷ್ಣನನ್ನು ಆಡಿಸುತ್ತಿರುವಾಗ 'ಕೈಯನ್ನು ತೋರಿಸು' ಎಂದು ವಿವಿಧ ಮಹಾತ್ಮ್ಯದೊಂದಿಗೆ ಹಾಡಿದ ಹಾಡಿದು.

**೧ ಅಂಗೈಯಲಿ ಧ್ವಜಪದ್ಮ** ( ವಿರಾಜಿತ )=ಇವು ಮಹಾಪುರುಷರ ಸಾಮುದ್ರಿಕ ಲಕ್ಷಣಗಳು.

**೨ ಬಡಬ್ರಾಹ್ಮಣ**=ಸುದಾಮ. ( ಸಂ. ೧ ಪು. ೨೬೮ ).

**ಕೊಡೆಮಾಡಿ....ಕೈಯ ತೋರೊ**=( ಸಂ. ೧, ಪು. ೨೮೯ ).

**ಕಡುಹಿರಣ್ಯಾಕ್ಷನ....ಕೈಯ ತೋರೊ**=ನರಸಿಂಹಾವತಾರ.

**ದೃಢಪ್ರಹ್ಲಾದನ....ಕೈಯ ತೋರೊ**=ನರಸಿಂಹಾವತಾರ.

**೩ ಬಲ್ಲಿದ ಮಲ್ಲರ ಮರ್ದಿಸಿ....ಕೈಯ ತೋರೊ** =( ಸಂ. ೨, ಪು. ೧೮೩ ).

**ಕುಬುಜೆಯ ಡೊಂಕನು .... ಕೈಯ ತೋರೊ** = ( ಸಂ. ೧, ಪು. ೨೭೯ ).

**ಬಿಲ್ಲನು ಎಡಗೈಯಲಿ---ಕೈಯ ತೋರೊ** :

ಬಲರಾಮ ಕೃಷ್ಣರನ್ನು ಕೊಲ್ಲುವ ಹೊಂಚುಹಾಕಿ ಕಂಸನು ಹೂಡಿದ ಧನುರ್ಯಾಗ ( ಬಿಲ್ಲುಹಬ್ಬ ಮತ್ತು ಮಲ್ಲಯುದ್ಧ )ದಲ್ಲಿ ಪರಶುರಾಮನಿಂದ ದೊರಕಿಸಿದ

ಬಿಲ್ಲನ್ನು ಕೃಷ್ಣನು ಎಡಗೈಯಿಂದ ಮುರಿದು, ಕಂಸನನ್ನು ಕೊಂದನು. ( ಹರಿವಂಶ ೨–೨೭ ).

**ಮಲ್ಲಿಪೂತನಿಯ....ಕೈಯ ತೋರೊ**=( ಸಂ. ೧, ಪು. ೨೭೫ ).

**೪ ಬಲಿಯನು ವಂಚಿಸಿ .... ಕೈಯ ತೋರೊ** = ( ಸಂ. ೧, ಪು. ೨೬೨ ).

**ಫಲ-ಪುಷ್ಪದ ಪಾರಿಜಾತ....ಕೈಯ ತೋರೊ :**

ನರಕಾಸುರನನ್ನು ಕೊಂದ ಮೇಲೆ ಅವನ ಬಳಿಯಲ್ಲಿದ್ದ ಅದಿತಿಯ ಕುಂಡಲಗಳನ್ನು ದೇವೇಂದ್ರನಿಗೆ ಕೊಡಲು ಶ್ರೀಕೃಷ್ಣನು ಸತ್ಯಭಾಮೆಯೊಂದಿಗೆ ಸ್ವರ್ಗಕ್ಕೆ ಹೋದನು. ಅಗ ಇಂದ್ರನಿಂದ ಅನೇಕ ಉಪಚಾರಗಳನ್ನು ಪಡೆದು ತಿರುಗಿ ಬರುವಾಗ ಸತ್ಯಭಾಮೆಯ ಅಪೇಕ್ಷೆಗನುಸಾರವಾಗಿ ನಂದನವನದಲ್ಲಿದ್ದ ಪಾರಿಜಾತ ವೃಕ್ಷವನ್ನು ಕಿತ್ತು ದ್ವಾರಕೆಗೆ ತಂದನು. ( ಭಾಗ ೧೦–೫೯–೩೯ ).

**ಒಲಿದು ಪಾರ್ಥನಿಗೆ....ಕೈಯ ತೋರೊ**=( ಭಾರತ, ಉ. ೭ ).

**೫ ಆಕಾಶದ ಚಂದ್ರನು....ಕೈಯ ತೋರೊ** : ( ಈ ಕಥಾ-ಸಂದರ್ಭ ನಮಗೆ ದೊರೆತಿಲ್ಲ. )

**ನಾಕಪತಿಗೆ ಅಭಯವನಿತ್ತ—ಕೈಯ ತೋರೊ :**

ಗೋವರ್ಧನೋದ್ಧಾರವಾದ ಬಳಿಕ, ಪಶ್ಚಾತ್ತಾಪಪಟ್ಟ ಇಂದ್ರನು ಶ್ರೀಕೃಷ್ಣನ ದರ್ಶನಕ್ಕೆ ಬಂದಾಗ, ಶ್ರೀಕೃಷ್ಣನು ಆವನನ್ನು ಅನುಗ್ರಹಿಸಿ ಅಭಯ ಕೊಟ್ಟು ಕಳಿಸಿದನು. ( ಭಾಗ ೧೦–೨೭–೧೭ ).

## ೧೫ನೆಯ ಹಾಡು

ಶ್ರೀಕೃಷ್ಣನನ್ನು ಆಡಿಸುವ ಮತ್ತೊಂದು ಹಾಡಿದು. ಈಗಲೂ ಮನೆಮನೆಯಲ್ಲಿಯೂ ಈ ಹಾಡನ್ನು ಹಾಡಿ ಮಕ್ಕಳನ್ನು ಲಾಲಿಸುವುದು ರೂಢಿಯಲ್ಲಿದೆ.

**೧ ಯದುಕುಲವಾರಿಧಿಚಂದ್ರ**=ಕೃಷ್ಣ.

**೨ ಬಿಲ್ಲುಹಬ್ಬ**=ಕೃಷ್ಣನನ್ನು ಮೋಸಗೊಳಿಸಬೇಕೆಂದು ಕಂಸನು ಹೂಡಿದ ಧನುರ್ಯಾಗ.

**ಮಲ್ಲಕಾಳಗ**=ಚಾಣೂರ-ಮುಷ್ಟಿಕರ ಕೂಡ ನಡೆದ ಕುಸ್ತಿ.

**ಮದ್ದಾನೆ**=ಕುವಲಯಾಪೀಡ ( ಕಂಸನ ದುಷ್ಟ ಮದ್ದಾನೆ. )

**ಫುಲ್ಲಾಕ್ಷ**=ಅರಳಿದ ಕಮಲದಂತಿರುವ ಕಣ್ಣು.

**೩ ಮಧುರಾ**=( ಸಂ. ೧, ಪು. ೨೪೪ ).

**೫ ಶೇಷಗಿರಿ**=ತಿರುಪತಿ.

## ೧೬ನೆಯ ಹಾಡು

ಕೂಸನ್ನಾಡಿಸುವ ಇನ್ನೊಂದು ಹಾಡು.

**೧ ಅಡವಿಯೊಳಗೆ ಅಸುರನ ಕೊಂದ :**

ತೃಣಾವರ್ತನೆಂಬ ಅಸುರ. ಇವನು ಕಂಸನ ಬಳಗದವನು. ಇವನು ಬಿರುಗಾಳಿಯಾಗಿ ಗೋಕುಲವನ್ನು ಹೊಕ್ಕು, ಕೃಷ್ಣನನ್ನು ಹಾರಿಸಿಕೊಂಡು ಹೋಗಲು ಬಂದನು. ಕೃಷ್ಣನನ್ನು ಎತ್ತಿದಾಗ ಅತಿ ಭಾರವಾಗಲು, ಕೊರಳಿಗೆ ಕಟ್ಟಿಕೊಂಡು ಎತ್ತುವ ಪ್ರಯತ್ನ ಮಾಡಿದನು. ಕೃಷ್ಣನು ತನ್ನ ಕೈಗಳಿಂದ ಉರುಲು ಹಾಕಲು, ಅಸುರನು ಸತ್ತು ಕೆಳಗೆ ಬಂಡೆಯ ಮೇಲೆ ಬಿದ್ದನು. ( ಭಾಗ ೧೦–೭–೨೬–೨೮ ).

**ಮಡುವಿನೊಳಗೆ ಮಕರನ ಸೀಳ್ದ ಕೈಗೆ**=ಗಜೇಂದ್ರಮೋಕ್ಷದ ಕಥೆ. ( ಸಂ. ೧, ಪು. ೨೫೮ ).

**ಭೂಮಿ ಬೇಡಿದ ಕೈಗೆ**=ವಾಮನಾವತಾರ. ( ಸಂ. ೧, ಪು. ೨೬೨ ).

**೨ ಮಾವ**=ಕಂಸ.

**ಪಂಕಜಮುಖಿಯರ ಕುಣಿಸುವ**=ರಾಸಕ್ರೀಡೆ. ( ಭಾಗ ೧೦–೨೯ ).

**೩ ಬೆಟ್ಟವನೆತ್ತಿದ ಕೈಗೆ**=ಗೋವರ್ಧನೋದ್ಧಾರ. ( ಸಂ. ೧, ಪು. ೨೮೯ ).

**ಸೃಷ್ಟಿಯ ದಾನವ ಬೇಡಿದ ಕೈಗೆ**=ವಾಮನಾವತಾರ. ( ಸಂ. ೧, ಪು. ೧೬೨ ).

**ದುಷ್ಟ....ಮಡುಹಿದ ಕೈಗೆ**=ಪರಶುರಾಮಾವತಾರ.

**೪ ಕಾಳಿಯ ಮಡುವನು....ಕೈಗೆ** ( ಸಂ. ೧, ಪು ೨೫೦ ).

**ಏಳು ಗೂಳಿಯ ಗೆದ್ದ....ಕೈಗೆ**=( ಭಾಗ ೧೦-೫೮-೪೨-೪೫ ).

## ೧೭ನೆಯ ಹಾಡು

ಗೋಕುಲದ ಹೆಣ್ಣುಮಕ್ಕಳು ಒಂದೆಡೆಯಲ್ಲಿ ಸೇರಿ, ಚಪ್ಪಳೆ ಇಕ್ಕುತ್ತ ಬಾಲ-ಕೃಷ್ಣನನ್ನು ಆಡಿಸಿದ ವಿಷಯವು ಈ ಹಾಡಿನಲ್ಲಿದೆ.

೧ **ಉಡಿಗೆಜ್ಜೆ**=ಗೆಜ್ಜೆಯ ಉಡಿದಾರ.

೨ **ವೌರಿ**=ಬಜಂತ್ರಿ, ಸನಾದಿ.

**ದಂಡಿಗೆ**=ತಂಬೂರಿ.

**ಆರ್ತಿ**=ಪ್ರೀತಿ.

**ಪರವಸ್ತು**=ಪರಬ್ರಹ್ಮ.

## ೧೮ನೆಯ ಹಾಡು

ಬಾಲಕೃಷ್ಣನನ್ನು ಕುಣಿಸಿದ ಬಣ್ಣನೆ ಈ ಹಾಡಿನಲ್ಲಿ ಇದೆ.

೧ **ಲೋಕವ ತಾಳ್ದನ**=ಆದಿಕೂರ್ಮನ.

**ವನೆ**=ಸಮುದ್ರ.

**ತೂಕದ ನುಡಿ ಕದ್ದವನ**=ವೇದಗಳನ್ನು ಕದ್ದ ಶಂಖಾಸುರನ.

**ನಾಕರಿಸು**=ನಾಶಪಡಿಸು.

**ಗೋಪ**=ಮಿಾನ.

**ಆಕರಿಸು**=ಸಂಗ್ರಹಿಸು.

೨ **ಎಡೆಯಿಲ್ಲದೆ ನಡೆವವನ**=ಎಲ್ಲ ಕಡೆಗೂ ಸಂಚರಿಸುವವನ ಎಂದರೆ ವಾಯುದೇವರ.

**ಕೂಡಿರುವನ**=ಶೇಷನನ್ನು ( ವಾಯು ಕಕ್ಷ ೩. ಶೇಷ ಕಕ್ಷ ೫. )

**ಹಿಡಿತಿಂಬನ**=ಗರುಡನ.

**ಒಡಹುಟ್ಟಿದನ**=ಅರುಣನ.

**ಒಡೆಯನ**=ಸೂರ್ಯನ.

**ಕಂದನ**=ಕರ್ಣನ.

**ವೈರಿಯು**=ಅರ್ಜುನನ.

**ಬಂಡಿಯು ಹೊಡೆದ ಮಹಾತ್ಮನ**=ಶ್ರೀಕೃಷ್ಣನನ್ನು.

**೩ ಒಣಗಿದ ಮರ.... ಬಣತಿಗೆ ಪುಟ್ಟಿದ ವನ** :

ಕಾಳಿಂಗನ ವಿಷದ ಫೂತ್ಕಾರದಿಂದ ಯಮುನೆಯ ದಂಡೆಯ ವನವೆಲ್ಲ ಒಣಗಿ ಹೋಗಿದ್ದಿತು.

**ಬಣತಿಗೆ**=ಬಂದಳಿಕೆ ( ಬಂದರಿಕೆ ).

**ಕ್ಷಣಮುನ್ನರಿಯದೆ**=ಏನೂ ವಿಚಾರಮಾಡದೆ.

**ಆಹಾರಕೆ**=ಹೊಡೆದೋಡಿಸಲಿಕ್ಕೆ.

**೪ ಮಾವ**=ಸಮುದ್ರರಾಜ.

**ಮಾವನೊಡನೆ.... ಗೋಕರ್ಣದಿ** :

ಗೋಕರ್ಣದಲ್ಲಿರುವ ವೆಂಕಟರಮಣನ ದೇವಾಲಯವನ್ನು ಇಲ್ಲಿ ದಾಸರು ಸೂಚಿಸುವಂತೆ ತೋರುತ್ತದೆ.

**ಮೂವರ ( ಮೊಲೆ )**=ದೇವಕಿ, ಯಶೋದೆ, ಪೂತನಿಯರ.

**ಮೂವರ ಅಣ್ಣ**=ಶ್ರೀರಾಮ.

**ಏಕಮೂರ್ತಿ**=ಸರ್ವೋತ್ತಮ.

## ೧೯ನೆಯ ಹಾಡು

ಬಾಲಕೃಷ್ಣನು ಕುಣಿದ ರೀತಿಯನ್ನು ಈ ಹಾಡಿನಲ್ಲಿ ಹೇಳಲಾಗಿದೆ.

**೩ ಭಾಗವತಪುರ**=ಗೋಕುಲ.

## ೨೦ನೆಯ ಹಾಡು

ಕುಣಿಯುವ ಶ್ರೀಕೃಷ್ಣನ ಬೆಡಗನ್ನು ಈ ಹಾಡಿನಲ್ಲಿ ಬಣ್ಣಿಸಲಾಗಿದೆ.

**೧ ಗೋಕುಲಾನಂದನ**=ಕೃಷ್ಣನ.

**ಕುರುಳುಕೂದಲ**=ಉಂಗುರುಗೂದಲ.

೨ **ಉಡೆ**=ಸೊಂಟ.

## ೨೧ನೆಯ ಹಾಡು

ಬಾಲಕೃಷ್ಣನ ವಿವಿಧ ಅವಸ್ಥೆಗಳನ್ನು ದಾಸರು ಈ ಸುಳಾದಿಯಲ್ಲಿ ವಿವರ ವಿವರವಾಗಿ ವರ್ಣಿಸಿದ್ದಾರೆ.

೧ **ಹೊಡೆಮರಳು**=ಹೊಟ್ಟೆಮೇಲಾಗಿ ಮಲಗು.

**ಉಗ್ಗುಉಗ್ಗು**=ಮಗುವಿನ ಮಾತಿನ ಆರಂಭದ ಸ್ಥಿತಿ.

**ವಾರುಡೆ**=ಓರಣವಾದ ಸೊಂಟ.

**ಮೃಡ**=ಶಿವ.

**ನಮ್ಮ ಒಡನಾಡಿ**=ಭಕ್ತರ ಸಂಗಾತಿ.

೨ **ಗಂಡಸ್ಥಳ**=ಕೆನ್ನೆ.

**ಉತ್ತಮಾಂಗ**=ತಲೆ.

**ಮುಸಳಿಸು**=ಕುಂದಿಸು, ಕುಗ್ಗಿಸು.

೩ **ಕೋರಯಿಸುವ**=ಕಣ್ಣು ಕುಕ್ಕುವ.

**ರೂಹು**=ರೂಪ.

೪ **ತುಂಬಿಗುರುಳು** = ಗುಂಗಿಹುಳುವಿನಂತೆ ಕಪ್ಪಾದ ಉಂಗುರುಗೂದಲು.

**ನೊಸಲು**=ಹಣೆ.

**ಒಳಗಣ ಜಗಂಗಳ ಹೊಟ್ಟೆಯು ತುಂಬುವನಕ** = ತನ್ನ ಹೊಟ್ಟೆಯಲ್ಲಿದ್ದ ಜಗತ್ತಿನ ಎಲ್ಲ ಜೀವಿಗಳ ಹೊಟ್ಟೆ ತುಂಬುವ ವರೆಗೆ.

೫ **ಬಲಭದ್ರರಾಯ**=ಬಲರಾಮ.

**ಇಳೆಯ+ಅಯ್ಯನ+ಅಯ್ಯ**=ಬ್ರಹ್ಮನ ತಂದೆ—ಶ್ರೀಕೃಷ್ಣ.

೬ **ವಟಪತ್ರ....ಶಿಶುವೀತನ**=( ಭಾಗ ೩–೩೩–೪ ).

೭ **ಮಂದರ**....**ತೋಳೊ**=ಕೂರ್ಮಾವತಾರ.

**ಸಿಂಧುವಿನಂಬಿನ**....**ತೋಳೊ** :

ರಾಮನು ಸಮುದ್ರರಾಜನಿಗೆ ಲಂಕೆಗೆ ಹೋಗಲು ದಾರಿಮಾಡಿಕೊಡೆಂದು ಪ್ರಾರ್ಥಿಸಿದನು. ಸಮುದ್ರರಾಜನು ಕೇಳದಿರಲು, ಆಗ ಅವನ ಮೇಲೆ ಅವನು ಬಾಣ ಪ್ರಯೋಗ ಮಾಡಿದನು. ( ರಾಮಾ. ಯು. ೨೧ ).

**ಬಂದಿ**=ತೋಳ್ಬಂದಿ.

## ೨೨ನೆಯ ಹಾಡು

ಶ್ರೀಕೃಷ್ಣನ ಬಾಲಲೀಲೆಯ ಕಥೆಗಳನ್ನು ಕೌತುಕಮಾಡಿ ಒಬ್ಬ ಗೋಪಿ ಇನ್ನೊಬ್ಬಳಿಗೆ ಹೇಳುತ್ತಾಳೆ. ಇದರಲ್ಲಿಯ ಶ್ರೀಕೃಷ್ಣನ ಬೇರೆ ಬೇರೆ ಬಾಲಚೇಷ್ಟೆಗಳ ವಿಷಯ ಭಾಗವತ, ಹರಿವಂಶಗಳಲ್ಲಿ ಕಂಡುಬರುವುದಿಲ್ಲ. ಬೇರೆ ಪುರಾಣಗಳಲ್ಲಿ ಇರಬಹುದು.

೧ **ಅಪ್ರತಿ**=ಸರಿಗಟ್ಟದ.

**ತಿಂಗಳ**=ಚಂದ್ರ.

೫ **ಚರಿಯ**=( ತ್ಸ. ಚರ್ಯಾ ) ಇರುವಿಕೆ, ಸ್ಥಿತಿ.

## ೨೩ನೆಯ ಹಾಡು

ಗೋಪಿಯರು ಯಶೋದೆಯ ಬಳಿ ಬಂದು, ನಿನ್ನ ಕೂಸನ್ನು ನೋಡಿದೆವೆಂದು ಸಂಭ್ರಮದಿಂದ ಹೇಳುವುದು ಪಲ್ಲವಿಯಲ್ಲಿ ಮಾತ್ರವಿದೆ. ನುಡಿಗಳಲ್ಲೆಲ್ಲ ಬೇರೆ ಬೇರೆ ಕ್ಷೇತ್ರಸ್ಥ ದೇವತೆಗಳ ವರ್ಣನೆಯಿದೆ.

೧ **ಶೇಷಗಿರಿ**=ತಿರುಪತಿ.

**ವೀಸ**=ಚಿಕ್ಕ ನಾಣ್ಯ.

೨ **ಕಂಚಿ**=( ಸಂ. ೧, ಪು. ೨೩೮ ).

೩ **ದೊಡ್ಡಿ**=ತುರುಮಂದೆ.

**ಒಡ್ಡಿಜಗನ್ನಾಥ** ( ಸಂ. ೧, ಪು. ೨೩೭ ).

**೪ ಹಡಗನೇರಿ ಬಂದು ಉಡುಪಿಯುಲಿಪ್ಪನೆ**=( ಮಧ್ವವಿಜಯ ಸರ್ಗ ೯-೪೦-೪೫ ).

ಮಧ್ವಾಚಾರ್ಯರು ನರಹರಿತೀರ್ಥರಿಗೆ ಸಂನ್ಯಾಸ ಕೊಟ್ಟ ಬಳಿಕ, ಉಡುಪಿಯಲ್ಲಿ ಕೃಷ್ಣಮೂರ್ತಿಯನ್ನು ಸ್ಥಾಪಿಸುವ ವಿಚಾರ ಮಾಡಿ, ಶಿಷ್ಯರುಸಹಿತ ಒಂದು ಜಲಾಶಯ ದಲ್ಲಿ ಮುಳುಗಿ, ಅಲ್ಲಿ ನೆಲಸಿದ ಕಲ್ಲಿನ ಪ್ರತಿಮೆಯನ್ನು ಎತ್ತಿ ಮೇಲಕ್ಕೆ ತಂದರು. ಅಲ್ಲಿ ನೆರೆದ ೩೦ ಮಂದಿ ಬ್ರಾಹ್ಮಣರು ಅದನ್ನು ಎತ್ತಲಾರದಾದರೂ, ಶ್ರೀ ಮಧ್ವಾಚಾರ್ಯರು ಅದನ್ನು ಹಗುರಾಗಿ ಎತ್ತಿ ಮಠದಲ್ಲಿ ತಂದಿಟ್ಟರು. ವ್ಯಾಪಾರಸ್ಥರ ಹಡಗಿನೆ ಲ್ಲಿರುವ ಗೋಪೀಚಂದನದಲ್ಲಿಯು ಶ್ರೀಕೃಷ್ಣನ ಮೂರ್ತಿಯನ್ನು ಆಚಾರ್ಯರು ಕಂಡು, ಅದನ್ನು ತಂದು ಗುಡಿಯಲ್ಲಿ ಸ್ಥಾಪಿಸಿದರೆಂಬುದು ಸಾಂಪ್ರದಾಯಿಕ ಕಥೆ ಯಾಗಿದೆ.

## ೨. ಶೈಶವಲೀಲೆ

### ೨೪ನೆಯ ಹಾಡು

ಗೋಪಸ್ತ್ರೀಯೊಬ್ಬಳು ಯಶೋದೆಯ ಬಳಿಗೆ ಬಂದು ‘ ಶ್ರೀಕೃಷ್ಣನು ಅಳುತ್ತ ಲಿದ್ದಾನೆ. ಅವನನ್ನು ರಮಿಸು ’ ಎಂದು ಹೇಳುತ್ತಲೆ, ದಶಾವತಾರದ ರೂಪಕದೊಂದಿಗೆ ಶ್ರೀಕೃಷ್ಣನನ್ನು ಬಣ್ಣಿಸಿದಂತೆ ದಾಸರು ಈ ಹಾಡಿನಲ್ಲಿ ಹೇಳಿದ್ದಾರೆ.

೧ **ನೀರೊಳಗಾಡಿ.... ಅಳುತಾನೆ**=ಮತ್ಸ್ಯಾವತಾರ.

**ಮೇರುವ.... ಅಳುತಾನೆ**=ಕೂರ್ಮಾವತಾರ.

**ಧಾರಿಣಿ.... ಅಳುತಾನೆ**=ವರಾಹಾವತಾರ.

**ದುರುಳ.... ಅಳುತಾನೆ**=ನರಸಿಂಹಾವತಾರ.

೨ **ನೆಲವನಳೆದು.... ಅಳುತಾನೆ**=ವಾಮನಾವತಾರ.

**ಛಲದಿಂದ.... ಅಳುತಾನೆ**=ಪರಶುರಾಮಾವತಾರ.

**ಬಲುಕಪಿ.... ಅಳುತಾನೆ**=ರಾಮಾವತಾರ.

**ನೆಲುವಿನ.... ಅಳುತಾನೆ**=ಕೃಷ್ಣಾವತಾರ.

೩ **ಬಟ್ಟಬತ್ತಲೆ.... ಅಳುತಾನೆ**=ಬೌದ್ಧಾವತಾರ.

**ಶ್ರೇಷ್ಠ ತೇಜಿ.... ಅಳುತಾನೆ**=ಕಲ್ಕ್ಯವತಾರ.

## ೨೫ನೆಯ ಹಾಡು

ಇನ್ನೊಬ್ಬ ಗೋಪಸ್ತ್ರೀ ಬಾಲಕೃಷ್ಣನು ತನ್ನ ಮಾತ ಕೇಳಲೊಲ್ಲನು, ಅವನಿಗೆ ಬುದ್ಧಿಯನ್ನು ಹೇಳು— ಎಂದು ಯಶೋದೆಗೆ ಹೇಳಿದಂತೆ, ದಾಸರ ರಚನೆ ಇಲ್ಲಿದೆ. ಈ ಹಾಡಿನಲ್ಲಿಯೂ ದಶಾವತಾರದ ರೂಪಕಗಳಿವೆ.

೧ **ಬಿಟ್ಟ ಕಂಗಳ ಮುಚ್ಚಲೊಲ್ಲನೆ**=ಮತ್ಸ್ಯಾವತಾರ.

**ಬೆಟ್ಟಕ್ಕೆ ಬೆನ್ನೊಡ್ಡಿ ನಿಂತನೆ**=ಕೂರ್ಮಾವತಾರ.

**ಸಿಟ್ಟಿಂದ ಕೋರೆಯ ತೋರ್ಪನೆ**=ವರಾಹಾವತಾರ.

**ಬೇಗ ಗಟ್ಟ ಉಕ್ಕಿನ.... ರಂಗ**=ನರಸಿಂಹಾವತಾರ.

೨ **ಮೂರಡಿ ಭೂಮಿಯ ಬೇಡಿದನೆ**=ವಾಮನಾವತಾರ.

**ನೃಪರ ಬೇರ.... ತಂದನೆ**=ಪರಶುರಾಮಾವತಾರ.

**ನಾರಸೀರೆಯನುಟ್ಟುಕೊಂಡನೆ**=ರಾಮಾವತಾರ.

**ಬೇಗ ಚೋರ.... ಕುಡಿದ ನಮ್ಮ**=ಕೃಷ್ಣಾವತಾರ.

೩ **ಬತ್ತಲೆ ನಾರಿಯುರನಪ್ಪಿದ**=ಬೌದ್ಧಾವತಾರ.

**ಬೇಗ ಉತ್ತಮ ಅಶ್ವವ ಹತ್ತಿದ**=ಕಲ್ಕ್ಯವತಾರ.

## ೨೬ನೆಯ ಹಾಡು

ಬಾಲಕೃಷ್ಣನನ್ನು ಎತ್ತಿಕೊಂಡು ಹೋದ ಒಬ್ಬ ಗೋಪಸ್ತ್ರೀಯು, ಯಶೋದೆಯ ಬಳಿಗೆ ಬಂದು 'ಈ ತುಂಟನನ್ನು ನೀನೇ ಎತ್ತಿಕೊಳ್ಳಮ್ಮ' ಎಂದು ಒಪ್ಪಿಸಿದಂತೆ ದಾಸರು ಈ ಹಾಡಿನಲ್ಲಿ ಹೇಳಿದ್ದಾರೆ.

೧ **ರಚ್ಚೆ**=ಗಲಾಟೆಯು, ಕಟಸಾರಿಯು.

**ಕದಪು**=ಗಲ್ಲ.

**ಎಣ್ಣೆ ಮಣಿ**=ಮುಂಗೈಗಳಿಗೆ ಕಟ್ಟಿದ ಮಣಿಯ ಸರ.

೨ **ತುಂಬಿ**=ಜೇನುಹುಳು.

## ೨೭ನೆಯ ಹಾಡು

ಶ್ರೀಕೃಷ್ಣನ ಬಾಲಚೇಷ್ಟೆಗಳಿಂದ ಸಂಭ್ರಾಂತಳಾದ ಯಶೋದೆ 'ಈ ಮಗು ವಿಗೇನಾಗಿದೆ ನೋಡಿರಿ' ಎಂದು ತಿಳಿದ ಹೆಣ್ಣುಮಗಳಿಗೆ ಗಾಬರಿಯಿಂದ, ಹೇಳಿದಂತೆ ಈ ಹಾಡಿನಲ್ಲಿದೆ.

೧ **ನಿದಾನಿಸಿ**=ಪರೀಕ್ಷಿಸಿ.

**ಪುಟ್ಟಿದಾರಭ್ಯ ಕಣ್ಣ ಮುಚ್ಚನಮ್ಮ**=ಮತ್ಸ್ಯಾವತಾರ.

**ತಾ ಎಷ್ಟಾದರೂ ಮೊಲೆಯುಣ್ಣನಮ್ಮ**=ಕೂರ್ಮಾವತಾರ.

**ಸೊಟ್ಟಾದ ಮುಖ ಮೇಲಕ್ಕೆತ್ತನಮ್ಮ**=ವರಾಹಾವತಾರ.

**ಹೀಗೆ ಎಷ್ಟು ಹೇಳಲಿ....ಮುಚ್ಚನಮ್ಮ**=ನರಸಿಂಹಾವತಾರ.

೨ **ಕಾಯ ಇದ್ದಂತಿದ್ದು ಹೆಚ್ಚಿತಮ್ಮ**=ವಾಮನಾವತಾರ.

**ಹೆತ್ತ ತಾಯಿಯ....ಆಯಿತಮ್ಮ**=ಪರಶುರಾಮಾವತಾರ.

**ನೋಯೆ ನೋಟಕೆ ಅಬ್ಧಿ ಬತ್ತಿತಮ್ಮ**=ರಾಮಾವತಾರ.

**ಅವನ ಬಾಯಿಯೊಳಗೆ....ತೋರಿತಮ್ಮ**=ಕೃಷ್ಣಾವತಾರ.

೩ **ಅತ್ಯಂತ ಮಾತುಗಳನಾಡಿದನಮ್ಮ**=ಬೌದ್ಧಾವತಾರ.

**ಮುಂದೆ... ಏರುವನಮ್ಮ**=ಕಲ್ಕ್ಯವತಾರ.

## ೨೮ನೆಯ ಹಾಡು

ಶ್ರೀಕೃಷ್ಣನು ಏಳುವುದಕ್ಕಿಂತ ಮೊದಲೆ, ಎಲ್ಲರೂ ಎದ್ದು ಮೊಸರನ್ನು ಕಡೆಯಿರಿ. ಏಳಿರಿ— ಎಂದು ಯಶೋದೆ ನೆರೆಹೊರೆಯವರನ್ನೆಲ್ಲ ಎಬ್ಬಿಸುತ್ತಾಳೆ.

೧ **ಚೂಡಾಮಣಿ**=ಶ್ರೇಷ್ಠ.

**ಚಂದ್ರಗಾವಿ**=ಕೆಂಬಣ್ಣದ ಸೀರೆ.

ನಿರಿ=ನೀರಿಗೆ.

೫ ಏಣಾಂಕ=ಚಂದ್ರ.

ಚಾಣೂರ=( ಸಂ. ೧, ಪು. ೨೫೩ ).

## ೨೯ನೆಯ ಹಾಡು

ಬೆಳಗಿನಲ್ಲಿ ತಾಯಿ ಯಶೋದೆ ಬಾಲಕೃಷ್ಣನನ್ನು ಒಲವಿನಿಂದ ಎಬ್ಬಿಸುತ್ತಿದ್ದಾಳೆ.

೧ ಹೊದ್ದಿರುವ=ಮುಸುಕಿದ.

ತಿಳಿ=ಎಚ್ಚರಾಗು.

## ೩೦ನೆಯ ಹಾಡು

ಶ್ರೀಕೃಷ್ಣನು ನಿದ್ರೆಯಿಂದ ಎದ್ದುದನ್ನು ದಶಾವತಾರದ ವರ್ಣನೆಯೊಂದಿಗೆ ದಾಸರು ಈ ಹಾಡಿನಲ್ಲಿ ವರ್ಣಿಸಿದ್ದಾರೆ.

೧ ಛಲ=ಹಟ.

ತಮ :

ವೇದವನ್ನು ಕದ್ದು ಸಮುದ್ರದಲ್ಲಿ ಮುಳುಗಿದ ಒಬ್ಬ ದೈತ್ಯ. ಇವನಿಗೆ ಸೋಮುಕ, ಶಂಖಾಸುರ ಎಂಬ ಹೆಸರುಗಳಿವೆ. ಶ್ರೀಹರಿ ಮತ್ಸ್ಯಾವತಾರ ತಾಳಿ ಇವನನ್ನು ಕೊಂದು ವೇದಗಳನ್ನು ಉದ್ಧರಿಸಿದನು. ( ಸಂ. ೧, ಪು. ೨೪೭ ).

ಬಲು=ದೊಡ್ಡದಾದ.

ನೆಲನ ಒಯ್ದವ=ಹಿರಣ್ಯಾಕ್ಷ.

೨ ಚಿಕ್ಕರೂಪ=ವಾಮನಾವತಾರ.

ಮಿಕ್ಕಿದ=ಸೊಕ್ಕಿಗೆದ್ದವರ.

ಬಲು ಪತಿವ್ರತೆಯರ....ಅಳಿದ=( ಸಂ. ೧, ಪು. ೨೪೮ ).

## ೩೧ನೆಯ ಹಾಡು

ಯಶೋದೆಯು ಶ್ರೀಕೃಷ್ಣನನ್ನು—ಬಾ ಎಂದು ವಿಧವಿಧದ ಆಶೆಗಳನ್ನು ತೋರಿಸಿ—ಕರೆದಂತೆ ಈ ಹಾಡಿನಲ್ಲಿದೆ.

೧ **ವಾಕು**=ಮುಂಗೈ ಆಭರಣ.

**ಝುಂಗಿಪ**=ಜಣಜಣವೆನ್ನುವ.

**ಡಿಂಗರಿಗ**=ಭಕ್ತ.

೨ **ಕೀಲುಮಾಗಾಯಿ**=ಕೀಲವಿರುವ ಮಾಗಾಯಿ.

**ಸೊಬಗೆ**=ಚೆಲುವೆ.

**ವೀಳ್ಯವಪಿಡಿ**=ಕೆಲಸವನ್ನು ಒಪ್ಪಿಕೊಳ್ಳು.

೩ **ವಿಶ್ವವ....ಕಂಡು ನಾ ಬಲ್ಲೆ**=(ಭಾಗ ೧೦–೬–೩೬–೩೭).

**ಉಮ್ಮಯ**=ಉತ್ಸಾಹ.

## ೩೨ನೆಯ ಹಾಡು

ತಾಯಿ ಯಶೋದೆ ಶ್ರೀಕೃಷ್ಣನಿಗೆ ಹಾಲನ್ನು ಕುಡಿಸುತ್ತ, ಆತನ ಮಾಹಾತ್ಮ್ಯವನ್ನು ಬಣ್ಣಿಸಿದ ಮಾತುಗಳು ಈ ಹಾಡಿನಲ್ಲಿವೆ.

೨ **ಲೋಕವ....ಬಳಲಿದುವಯ್ಯ**=ವಾಮನಾವತಾರ.

೩ **ಚೌಪಟಮಲ್ಲ**=ನಾಲ್ಕು ದಿಕ್ಕಿನಲ್ಲಿಯೂ ಯುದ್ಧ ಮಾಡುವವ.

**ಹದನು**=ರುಚಿ.

## ೩೩ನೆಯ ಹಾಡು

ತಾಯಿ ಯಶೋದೆ ಮಗನನ್ನು 'ಸೆರಗು ಬಿಡು, ಹಾಲನ್ನು ಕರೆಯಲು ಹೋಗುತ್ತೇನೆ' ಎಂದು ವಿವಿಧರೀತಿಯಲ್ಲಿ ರಮಿಸುತ್ತಾಳೆ.

೨ **ಭಾವಜನಯ್ಯ**=ಕಾಮನ ತಂದೆ. ಶ್ರೀಕೃಷ್ಣ

೩ **ಶರಧಿ**=ನದಿ.

## ೩೪ನೆಯ ಹಾಡು

ಕೃಷ್ಣನನ್ನು ಹುಡುಕುತ್ತ ಯಶೋದೆ ನೆರೆಹೊರೆಯ ಮನೆಗಳಲ್ಲಿ 'ನಮ್ಮ ಕೃಷ್ಣನನ್ನು ನೋಡಿದ್ದೀರಾ?' ಎಂದು ಕೇಳುವ ಮಾತುಗಳು ಈ ಹಾಡಿನಲ್ಲಿವೆ.

೧ **ತಿರುನಾಮ**=ಶ್ರೀನಾಮ.

೫ **ಸತ್ಯಭಾಮೆ** :

ಕೃಷ್ಣನ ಅಷ್ಟಮಹಿಷಿಯರಲ್ಲಿ ಒಬ್ಬಳು ( ಸಂ. ೨, ಪು. ೨೪೫ ) ಯದುವಂಶದ ಸತ್ರಾಜಿತನ ಮಗಳು. ( ಭಾಗ ೧೦–೫೬ ). ಸತ್ರಾಜಿತನು ಸೂರ್ಯನಿಂದ ದೊರಕಿಸಿದ ಸ್ಯಮಂತಕಮಣಿ ಕಳೆದು ಹೋದಾಗ, ಶ್ರೀಕೃಷ್ಣನ ಮೇಲೆ ಅಪವಾದ ಬರಲು ಅವನು ಆ ರತ್ನವನ್ನು ಜಾಂಬವಂತನಿಂದ ದೊರಕಿಸಿಕೊಂಡು, ಮರಳಿ ಅದನ್ನು ಸತ್ರಾಜಿತನಿಗೆ ಒಪ್ಪಿಸಿದನು. ಆಗ ಸತ್ರಾಜಿತನು ಪಶ್ಚಾತ್ತಾಪಪಟ್ಟು ತನ್ನ ಮಗಳಾದ ಸತ್ಯಭಾಮೆಯನ್ನು ಕೃಷ್ಣನಿಗೆ ಕೊಟ್ಟು ಮದುವೆಮಾಡಿದನು.

**ನಿತ್ಯೋತ್ಸವ**=ಸದಾನಂದ.

## ೩೫ನೆಯ ಹಾಡು

ತಾಯಿ ಶ್ರೀಕೃಷ್ಣನನ್ನು ಎಣ್ಣೆಹೂಸಿ ಎರೆಯುತ್ತಿರುವಾಗ ಹೇಳಿದ ಹರಕೆಯ ಮಾತುಗಳು ಈ ಹಾಡಿನಲ್ಲಿವೆ.

೧ **ಊಡು**=ತಿಕ್ಕಿ ಉಣಿಸು.

**ವಾಯುಸುತ**=ಭೀಮಸೇನ.

೩ **ದಯವಾಗು**=ದಯಾಮಯನಾಗು.

## ೩೬ನೆಯ ಹಾಡು

ಯಶೋದೆ ಮಗುವನ್ನು ಹೆದರಿಸಲು 'ಬೂಚಿ ಬಂದಿದೆ' ಎಂದು ಹೆದರಿಸಿ, ಹಾಲನ್ನು ಕುಡಿದು ಮಲಗಿಕೊಳ್ಳಲು ಹೇಳುತ್ತಾಳೆ.

**ನಾಲ್ಕು ಮುಖದ ಬೂಚಿ**=ಬ್ರಹ್ಮ.

೧ **ಬೂಚಿ**=ಬಾಬಾ.

**ಚಾಚಿ**=ಹಾಲು. ( ಮಕ್ಕಳ ಪ್ರೀತಿಯ ಮಾತು ).

**ಪಾಚಿಕೊಳ್ಳು**=ಮಲಗಿಕೊಳ್ಳು.

**ತೋಕರು**=ಮಕ್ಕಳು.

**ಕಾಕುಮಾಡು**=ತೊಂದರೆಕೊಡು.

**೨ ಮೂರು ಕಣ್ಣಿನ ಬೂಚಿ**=ಶಿವ.

**೩ ಅಂಗವೆಲ್ಲ ಕಂಗಳುಳ್ಳ**=ಇಂದ್ರ.

**ಕಂಗೆಡಿಸು**=ಗಾಬರಿಪಡಿಸು.

**೪ ಆರು ಮುಖದ ಬೂಚಿ**=ಕಾರ್ತಿಕೇಯ.

**ಈರಾರು**=ಹನ್ನೆರಡು.

**೫ ಮರದ ಮೇಲೆ ಇರುವುದೊಂದು**=ಹನುಮಂತದೇವರು.

## ೩೭ನೆಯ ಹಾಡು

'ತುಂಟತನ ಮಾಡುವ ಕೃಷ್ಣನನ್ನು ಹಿಡಿದುಕೊಂಡು ಹೋಗು, **ಜೋಗಿ!**' ಎಂದು ತಾಯಿ ನುಡಿದ ಮಾತುಗಳು ಈ ಹಾಡಿನಲ್ಲಿವೆ.

**೧ ಆಡುತ....ಮುಳುಗಿದ**=ಮತ್ಸ್ಯಾವತಾರ.

**ಬೇಡ....ನೆಗಹಿದ**=ಕೂರ್ಮಾವತಾರ.

**ಓಡುತ....ಸೀಳ್ವ**=ವರಾಹಾವತಾರ.

**ನೋಡ....ಅಂಜಿಸುವ**=ನರಸಿಂಹಾವತಾರ.

**೨ ಹುಲ್ಲಲಿ....ಕುಕ್ಕಿದ**=ವಾಮನಾವತಾರ.

ವಿ. ಸೂ.—ಬಲಿ ದಾನ ಕೊಡಲು ಸಂಕಲ್ಪ ಮಾಡುವಾಗ, ಅರ್ಘ್ಯಕಲಶದಲ್ಲಿ ಅಡ್ಡಿಯಾಗಿ ಕುಳಿತರು-ಶುಕ್ರಾಚಾರ್ಯರು. ವಾಮನಾವತಾರಿಯಾದ ಶ್ರೀಹರಿಯು ದರ್ಭವನ್ನು ಹಾಕಿ ಧಾರೆಯನ್ನು ಸರಿಪಡಿಸುವಾಗ, ಆ ದರ್ಭೆಯ ಏಟಿನಿಂದ ಶುಕ್ರಾಚಾರ್ಯರ ಒಂದು ಕಣ್ಣು ಹೋಯಿತು.

**ಬುದ್ಧಿ....ಎತ್ತಿದ**=ಪರಶುರಾಮಾವತಾರ.

**ಬಿಲ್ಲನು....ಎತ್ತಿದ**=ರಾಮಾವತಾರ.

**ಬಲ್ಲಿದ....ಬಂದ**=ಕೃಷ್ಣಾವತಾರ.

**ಬತ್ತಲೆ**=ಬೌದ್ಧಾವತಾರ.

**ಕುದುರೆಯು ಹತ್ತಬೇಡೆಂದರೆ ಹತ್ತುವ**=ಕಲ್ಕ್ಯವತಾರ.

## ೩೮ನೆಯ ಹಾಡು

ಗುಮ್ಮ ಬಹುವನೆಂದು ಶ್ರೀಕೃಷ್ಣನನ್ನು ತಾಯಿ ಹೆದರಿಸಿದಂತೆ ಈ ಹಾಡಿನಲ್ಲಿ ಇದೆ. ಇದರಲ್ಲಿಯು ಗುಮ್ಮ ಶಿವನೆಂಬುದನ್ನು ಇಲ್ಲಿಯ ಬಣ್ಣನೆಯಿಂದ ಅರಿತು ಕೊಳ್ಳಬಹುದು.

೧ **ಕಪಾಲ**=ತಲೆಪರಟೆ.

**ದೊಡ್ಡ ಬೆಟ್ಟದ ಹೆಣ್ಣ**=ಹಿಮಗಿರಿಯ ಮಗಳು—ಪಾರ್ವತಿ.

**ಮೈಯೊಳಿಟ್ಟವನಂತೆ**=ಅರ್ಧನಾರೀನಟೇಶ್ವರ.

೨ **ಐದು ತಲೆಗಳವನು**=ಸದ್ಯೋಜಾತ, ವಾಮದೇವ, ಅಘೋರ, ಈಶಾನ, ತತ್ಪುರುಷ ಎಂಬ ಐದು ಮೋರೆಗಳುಳ್ಳ ಶಿವ.

**ದಾರಿಯು....ಹೊತ್ತನು**=ಗಂಗೆ ಶಿವನ ಜಡೆಯಲ್ಲಿರುವಳು.

೩ **ಅನಲನೇತ್ರ**=ಉರಿಗಣ್ಣು.

**ಮುಂದಿಪ್ಪ....ಕೊಂದು ತಿಂದವನ** : ( ಚಿಲಿಯಾಳನೆ ? )

೫ **ಕರಿಯ ಅಜಿನ**=ಗಜಚರ್ಮ. ( ಸಂ. ೧, ಪು. ೧೯೪ ).

## ೩೯ನೆಯ ಹಾಡು

ಶ್ರೀಕೃಷ್ಣನು ಹೆದರಿದವನಂತೆ ನಟಿಸುತ್ತ ತಾಯಿಗೆ ' ಗುಮ್ಮನನ್ನು ಕರೆಯ ಬೇಡ ' ಎಂದು ಹೇಳಿದುದು ಈ ಹಾಡಿನಲ್ಲಿದೆ.

೧ **ಅಮ್ಮಿ**=ಮೊಲೆ ( ಮಕ್ಕಳ ಪ್ರೀತಿಯ ಮಾತು ).

**ಮುಮ್ಮು**=ಅನ್ನ ( ಮಕ್ಕಳ ಪ್ರೀತಿಯ ಮಾತು ).

**ಮಣ್ಣ ತಿನ್ನುವುದಿಲ್ಲ**=( ಭಾಗ ೧೦–೮–೩೫ ).

೨ **ಹಾವಿನ ಮೇಲಾಡೆ**=( ಭಾಗ ೧೦–೧೬ ).

**ಆವಿನ ಮೊಲೆಯೂಡೆ ಕರುಗಳನ್ನು ಬಿಡೆ**=( ಭಾಗ ೧೦–೮ ).

## ೪೦ನೆಯ ಹಾಡು

ಇದೂ ಒಂದು ಗುಮ್ಮನ ಹಾಡು. ಕಾಡುವ ಕೃಷ್ಣನನ್ನು ಹೆದರಿಸಲು ಯಶೋದೆ ಗುಮ್ಮನ ಬೆದರಿಕೆಯನ್ನು ತೋರಿಸುತ್ತಾಳೆ.

೧ **ಐದು ಬಾಣ**=ಪಂಚಬಾಣ, ಕಾಮ.

೨ **ಮರುಳ**=ಭೂತ.

೩ **ರುಂಡಮಾಲೆ**=( ಭಾರ. ಅನು. ೨೦೭ ).

೪ **ಓಡು**=ತಲೆಬುರುಡೆ.

## ೪೧ನೆಯ ಹಾಡು

ಶ್ರೀಕೃಷ್ಣನು 'ಯಶೋದೆಗೆ ಸುಮ್ಮನೆ ಯಾತಕ್ಕೆ ಅಂಜಿಸುತ್ತೀಯೆ? ಆ ಗುಮ್ಮನನ್ನು ತೋರಿಸು!' ಎಂದು ಕೇಳುತ್ತಾನೆ.

**ಪಂಚಾಶತ್ ಕೋಟಿ ವಿಸ್ತೀರ್ಣ ಭೂಮಿ**=೫೦ ಕೋಟಿ ಯೋಜನ ವಿಸ್ತೀರ್ಣವಾದ ಭೂಮಿ.

**ಹಂಚಿಸಿ ಕೊಡು**=ಪಾಲುಮಾಡಿ ಕೊಡು.

೨ **ತೋರಿದೆ ಬ್ರಹ್ಮಾಂಡ ಬಾಯೊಳಗೆ**=( ಭಾಗ ೧೦–೮–೩೭ ).

**ಗಾಳಿ ಅಸುರ**=ತೃಣಾವರ್ತ.

ಕಂಸನ ಅನುಚರರಲ್ಲಿ ಒಬ್ಬ ರಾಕ್ಷಸ. ಕಂಸನ ಪ್ರೇರಣೆಯಂತೆ ಬಲರಾಮ-ಕೃಷ್ಣರನ್ನು ಕೊಲ್ಲುವುದಕ್ಕಾಗಿ ಬಿರುಗಾಳಿ ರೂಪದಿಂದ ಬಂದು, ಅವರನ್ನು ಹೊತ್ತುಕೊಂಡು ಹೋಗುತ್ತಿರುವಾಗ, ಶ್ರೀಕೃಷ್ಣನು ಗರಿಮಾಸಿದ್ಧಿಯಿಂದ ದೇಹವನ್ನು ಭಾರವನ್ನಾಗಿ ಮಾಡಿ ಅವನ ಕುತ್ತಿಗೆಯ ಮೇಲೆ ಬಲವಾಗಿ ಗುದ್ದಿದನು. ಆಗ ತೃಣಾವರ್ತನು ಸತ್ತನು. ( ಭಾಗ ೧೦–೭ ).

**೩ ನಾಗಪತ್ನಿಯರಿಗೆ ಓಲೆಯ ಭಾಗ್ಯವನಿತ್ತೆ**=( ಭಾಗ ೧೦–೧೬ ).

**೪ ಅಕ್ರೂರನಿಗೆ.... ತೋರಿದೆ**=( ಸಂ. ೧, ೨೫೨ ).

**ಫಕ್ಕನೆ.... ಪೋದೆ**=( ಭಾಗ ೧೦–೩೯ ).

ಬಿಲ್ಲುಹಬ್ಬದ ಸಲುವಾಗಿ ಬಲರಾಮ–ಕೃಷ್ಣರನ್ನು ಕರೆತರಲು ಅಕ್ರೂರನನ್ನು ಕಂಸನು ಕಳಿಸಿನು. ಆಗ ಅಕ್ರೂರನು ರಥದೊಂದಿಗೆ ಗೋಕುಲಕ್ಕೆ ಬಂದು, ನಂದನ ಅಪ್ಪಣೆ ಪಡೆದು, ಬಲರಾಮ–ಕೃಷ್ಣರನ್ನು ರಥದಲ್ಲಿ ಕುಳ್ಳಿರಿಕೊಂಡು ಮಥುರೆಗೆ ಹೋದನು.

**ರಜಕನ ಕೊಂದು ಮಡಿಯನುಟ್ಟೆ**=( ಭಾಗ ೧೦–೪೧ ).

ಮಥುರೆಗೆ ಹೋದ ಬಳಿಕ ಶ್ರೀಕೃಷ್ಣನು ಅರಮನೆಯ ಅಗಸನನ್ನು ಕಂಡು, ಅವನು ಒಗೆದ ಬಟ್ಟೆಗಳನ್ನು ಬೇಡಿದನು. ಅವನು ಕೊಡದೆ ಸೊಕ್ಕಿನ ಮಾತುಗಳನ್ನಾಡಲು, ಅವನನ್ನು ಕೊಂದು ಅವನ ಬಟ್ಟೆಗಳನ್ನು ತಾನೂ ತೆಗೆದುಕೊಂಡ; ಹಾಗು ಗೋಪಾಲಕರಲ್ಲಿ ಹಂಚಿದ.

**೫ ಬಿಲ್ಲುಹಬ್ಬಕೆ.... ಮಡುಹಿದೆ**=ಚಾಣೂರ–ಮುಷ್ಟಿಕರನ್ನು ಕೊಂದೆ. ( ಭಾಗ ೧೦–೪೩ ).

**ಮುತ್ತೈಯ**=ಉಗ್ರಸೇನ.

## ೩. ಬಾಲಲೀಲೆ

### ೪೨ನೆಯ ಹಾಡು

ಗೊಲ್ಲಬಾಲಕನು ಎಳೆಯ ಕೃಷ್ಣನನ್ನು ಆಡಲು ಕರೆಯುವ ಹಾಡಿದು.

**೧ ಅಣ್ಣೆಕಲ್ಲು**=ದುಂಡುಹರಳು.

**ಕೋಲು**=( ಚಿಣಿ ) ಫಣಿ.

**೩ ಬಣ್ಣದಾಟ**=ಚಿತ್ರ-ವಿಚಿತ್ರವಾದ ಆಟಗಳು.

### ೪೩ನೆಯ ಹಾಡು

ಗೋಪಸ್ತ್ರೀಯೊಬ್ಬಳು ಶ್ರೀಕೃಷ್ಣನು ಬಂದುದನ್ನು ಕಂಡು ಸಂಭ್ರಮಭಾವದಿಂದ ಆಡಿದ ಮಾತುಗಳನ್ನು ಈ ಹಾಡು ಒಳಗೊಂಡಿದೆ.

೨ **ನಡುವಿನ ಗಂಟೆ**=ನಡುವಿನ ಪಟ್ಟಿಗೆ ಕಟ್ಟಿದ ಚಿಕ್ಕ ಗಂಟೆಗಳು.

**ತೊಡರು**=( ಆಭರಣ ) ಸರಪಳಿ.

## ೪೪ನೆಯ ಹಾಡು

ಶ್ರೀಕೃಷ್ಣನು ಶಿಶುಭಾವದಿಂದ ತಾಯಿಯ ಮುಂದೆ ದೂರಿಕೊಂಡ ಮಾತು ಗಳು ಈ ಹಾಡಿನಲ್ಲಿವೆ.

೧ **ಕಣ್ಣ ಮಿಾಟು**=ಕಣ್ಣು ಚಿವುಟು.

**ಕಾವಲು**=ಸೆರೆಮನೆ.

೩ **ಅಸುರೆ**=ಪೂತನಿ.

**ಶಿಶುವಾಗಲೆ**=ಚಿಕ್ಕವನಿರುವಾಗಲೆ.

೪ **ವತ್ಸಾಸುರ**=( ಸಂ. ೩, ಪು. ೨೮೬ ).

**ಶಕಟ**=( ಸಂ. ೧, ಪು. ೨೬೫ ).

೫ **ಕುಸುಮ....ಓಡಿದೆನಂತೆ**=( ಸಂ. ೩, ಪು. ೨೬೨ ).

**ಗಾಡಿಕಾರ**=ಬೆಡಗಿನವ.

## ೪೫ನೆಯ ಹಾಡು

ಯಶೋದೆ ಶ್ರೀಕೃಷ್ಣನನ್ನು ಕುರಿತು 'ನಿನ್ನೊಡನೆ ಯಾರೂ ಆಡಲಾರರು. ನೀನು ತುಂಬ ತುಂಟ' ಎಂದುದನ್ನು ಈ ಹಾಡಿನಲ್ಲಿ ಕಾಣಬಹುದು.

೧ **ಅನ್ನಿಗ**=(ತ್ಸ.) ಅನ್ಯಕ.

೨ **ಬೆರಳನೆಣಿಸಿ ಕೊಂದ**= ( ? )

೫ **ಚರಿಯ**=( ತ್ಸ. ಚರ್ಯಾ ) ನಡತೆ.

## ೪೬ನೆಯ ಹಾಡು

ತಾಯಿ ಯಶೋದೆ ಕೃಷ್ಣನ ವಿಷಯಕವಾದ ದೂರುಗಳಿಗೆ ಬೇಸತ್ತು, ಹೊರಗೆ ಆಡಲು ಹೋಗಬೇಡವೆಂದು ಆತನಿಗೆ ಹೇಳಿದಂತೆ ಈ ಹಾಡಿನಲ್ಲಿದೆ.

೧ **ಗಾಡಿಕಾರ್ತಿಯರು**=ಚೆನ್ನೆಯರು.

**ನೀರೊಳು**.... ಎಂಬರೊ=ಮತ್ಸ್ಯಾವತಾರ.

**ನಿನ್ನನು**.... ಎಂಬರೊ=ಕೂರ್ಮಾವತಾರ.

**ಕೋರೆಗಳಿಂದ**=ವರಾಹಾವತಾರ.

**ಸೀಳಿ.... ಹಾಕೆಂಬರೊ**=ನರಸಿಂಹಾವತಾರ.

೨ **ಪೊಡವಿ**.... ಎಂಬರೊ=ವಾಮನಾವತಾರ.

**ದೊಡ್ಡ**.... ಎಂಬರೊ=ಪರಶುರಾಮಾವತಾರ.

**ಕಿಡಿಗಣ್ಣ**.... ಎಂಬರೊ=ರಾಮಾವತಾರ.

೩ **ಬೆಟ್ಟ**.... ಎಂಬರೊ=ಕೃಷ್ಣಾವತಾರ.

**ಬರಿಬಟ್ಟಾಗಿ**.... ಎಂಬರೊ=ಬೌದ್ಧಾವತಾರ.

**ಪುಟ.... ನಲಿದಾಡುತ**=ಕಲ್ಕ್ಯವತಾರ.

## ೪೭ನೆಯ ಹಾಡು

ಈ ಮೊದಲಿನ ಹಾಡಿನ ಭಾವವೇ ಇಲ್ಲಿಯೂ ಮುಂದುವರಿದಿದೆ.

೩ **ಹೊಲಸು**.... ಎನ್ನುವರೊ=ಮತ್ಸ್ಯಾವತಾರ.

**ದೊಡ್ಡ**.... ಎನ್ನುವರೊ=ಕೂರ್ಮಾವತಾರ.

ಬಲು.... ಎನ್ನುವರೊ=ವರಾಹಾವತಾರ.

ಆ ಎಳೆಯ.... ಎಂಬುವರೊ=ನರಸಿಂಹಾವತಾರ.

೪ ಭಿಕ್ಷೆ.... ಎಂಬುವರೊ=ವಾಮನಾವತಾರ.

ಭೂಮಿ.... ಎಂಬುವರೊ=ಪರಶುರಾಮಾವತಾರ.

ಲಕ್ಷ್ಮಿ.... ಎಂಬುವರೊ=ರಾಮಾವತಾರ.

ವೈಲಕ್ಷಣ.... ಎಂಬುವರೊ=ಕೃಷ್ಣಾವತಾರ.

೫ **ಮಾನ....ಎನ್ನುವರೊ**=ಬೌದ್ಧಾವತಾರ.

**ಮಹಾಹೀನರ....ಎನ್ನುವರೊ**=ಕಲ್ಕ್ಯವತಾರ.

## ೪೮ನೆಯ ಹಾಡು

ತಾಯಿ ಯಶೋದೆ ಕೃಷ್ಣನಿಗೆ ಮನೆಯಲ್ಲಿಯೇ ಆಡು— ಎಂದು ಹೇಳುತ್ತಾಳೆ.

೫ **ದೂರು**=ನಿಂದೆ.

## ೪೯ನೆಯ ಹಾಡು

ದಾಸರು ತಾಯಿಯಾಗಿ ಶ್ರೀಕೃಷ್ಣನನ್ನು ಹೃದಯಮಂದಿರವನ್ನು ಬಿಟ್ಟು ಹೋಗಬೇಡವೆಂದು ಹೇಳಿದ ಮಾತುಗಳು ಈ ಹಾಡಿನಲ್ಲಿವೆ.

೧ **ಗಹ್ವರ**=ರಹಸ್ಯಸ್ಥಾನ.

೨ **ಹಗರಣ**=ನಾನಾಬಗೆಯ ಹುಡುಗಾಟ.

## ೫೦ನೆಯ ಹಾಡು

ಇಲ್ಲಿಯೂ ಮಾತೃಭಾವದ ಆತುರವನ್ನು ನೋಡಬಹುದು.

೧ **ವಾತ**=ತೃಣಾವರ್ತ.

**ಪೋತತನ**=ಹುಡುಗಾಟ.

೨ **ದುಡುಕು**=ಸಾಹಸ.

## ೫೧ನೆಯ ಹಾಡು

ದಾಸರು ಶ್ರೀಕೃಷ್ಣನ ಬಾಲಲೀಲೆಯ ಮಹಿಮೆಯನ್ನು ಮೆಚ್ಚಿ ಈ ಹಾಡಿನಲ್ಲಿ ಕೊಂಡಾಡಿದ್ದಾರೆ.

೧ **ಕೆಸರ....ಬಾಯೊಳಗೆ**=( ಭಾಗ ೧೦-೮-೩೬ ).

೫ **ಗೋವಾಡಿ**=ಗೋಕುಲ,

## ೫೨ನೆಯ ಹಾಡು

ಶ್ರೀಕೃಷ್ಣನ ಬಾಲಲೀಲೆ ಹಾಗು ಮಾಹಾತ್ಮ್ಯವನ್ನು ಈ ಸುಳಾದಿ ಬಣ್ಣಿಸುತ್ತಿದೆ.

೨ **ಕಲ್ಲಿ**=ಹಣಿಕೆಯ ಚೀಲ.

**ಕಂಜ**=ಕಮಲ.

೩ **ನೀಲಮುತ್ತಿನ**=ನೀಲ ಮತ್ತು ಮುತ್ತುಗಳ.

**ಮಂದಾರ**=ಒಂದು ಜಾತಿಯ ದಿವ್ಯಪುಷ್ಪ.

**ದಂಡೆ**=ದಂಡಿ=ಸೊಬಗು, ರೀತಿ.

**ಖಳರ ಮುಖಗಳ ದಂಡೆ ಛಾಳಲೋಚನ**=ಮೇಲೇರಿ ಬರುವಂಥ ರಾಕ್ಷಸರ ಸೈನ್ಯವನ್ನು ನಾಶ ಮಾಡುವವ.

**ಮೌಳಿಕಂದರು**=ಆಟದಲ್ಲಿ ಹಿರಿಯ ಹುಡ್ದುಗರು.

**ಸ್ವತೋಮಹೀಯಾನ್**=ಸ್ವಯಂಪರಿಪೂರ್ಣ

೪ ಈ ನುಡಿಯ ಅರ್ಥ ಸ್ಪಷ್ಟವಿಲ್ಲ.

೫ **ತತಿ**=ಸಮೂಹ.

**ಶ್ರುತಿಯ....ಗರುವನ**=ಶ್ರುತಿಸಮೂಹಗಳ ಅಂತಿಮ ಉದ್ದೇಶವಾಗಿರುವ ಮಾಹಾತ್ಮ್ಯವುಳ್ಳವನ.

**ಕರ್ಮಠರು**=ಜ್ಞಾನ-ಭಕ್ತಿಶೂನ್ಯರು.

೬ **ಪಂಚಮುಖ**=ಶಿವ.

೭ **ದಾಮಣಿ**=( ಸಂ. ದಾಮನ್ ) ಕಣ್ಣಿ.

**ಮೂಗುನೇಣು**=ಮೂಗುದಾಣ.

**ಹೇರು**=ಭಾರ.

**ವ್ಯವಹಾರಿ**=ವ್ಯಾಪಾರಿ.

೮ **ಯಂತ್ರವಾಹಕ**=ಸೂತ್ರಧಾರ.

## ೪. ಗೋಪೀಲೀಲೆ

### ೫೩ನೆಯ ಹಾಡು

ಬಾಲಕೃಷ್ಣನು ಯಶೋದೆಯ ಕಣ್ಣನ್ನು ಮುಚ್ಚಿದಾಗ, ಅವಳು ಆಡಿದ ಮಾತುಗಳನ್ನು ಈ ಹಾಡು ಒಳಗೊಂಡಿದೆ.

೧ **ರತಿಪತಿಪಿತ**=ಕೃಷ್ಣ ( ಶ್ರೀಹರಿ ).

**ಅನ್ವಯ**=ಹೊಂದಿಕೆ, ಏಕವಾಕ್ಯತೆ.

**ಶತತಪ್ಪು....ಎಣಿಸಿದವನೊ :**

ಶಿಶುಪಾಲ ಕೃಷ್ಣನ ಸೋದರತ್ತೆಯ ಮಗ. ಅವನಿಗೆ ಹುಟ್ಟಿದಾಗ ಮೂರನೆಯ ಕಣ್ಣೊಂದಿತ್ತು. ಯಾರಿಂದ ಆತನಿಗೆ ಸಾವು ಬರುವದೊ ಅವನ ಕೈಯಲ್ಲಿ ಕೂಸನ್ನು ಕೊಟ್ಟರೆ, ಮೂರನೆಯ ಕಣ್ಣು ಕಳಚಿ ಬೀಳುವುದೆಂದು ವರವಿತ್ತು. ಕೃಷ್ಣನು ಬಂದು ಆ ಕೂಸನ್ನು ಎತ್ತಿಕೊಂಡಾಗ, ಮೂರನೆಯ ಕಣ್ಣು ಇಲ್ಲದಂತಾಯಿತು. ಆಗ ಶಿಶುಪಾಲನ ತಾಯಿ ಕೂಸನ್ನು ಕಾಯಬೇಕೆಂದು ಶ್ರೀಕೃಷ್ಣನನ್ನು ಬೇಡಿಕೊಂಡಳು. ಆಗ ಶ್ರೀಕೃಷ್ಣನು ಈತನ ನೂರು ತಪ್ಪುಗಳನ್ನು ಕ್ಷಮಿಸುವೆನೆಂದು ವಚನ ಕೊಟ್ಟಿದ್ದನು. ( ಭಾರ. ಸಭಾ ೬೬ ).

೨ **ಕರಿವೈರಿ**=ಕರಿರಾಜನನ್ನು ಕಾಡಿದ ಮೊಸಳೆ.

**ರುಚಿ**=ಬೆಳಕು, ಕಾಂತಿ.

**ಸಿರಿ**=ವೀರತನ.

೪ **ಸಾಂದೀಪಿ**=( ಸಂ. ೧, ಪು. ೨೫೮ ).

### ೫೪ನೆಯ ಹಾಡು

ಗೋಪಸ್ತ್ರೀಯರು ಬಾಲಕೃಷ್ಣನನ್ನು ದಾಸಯ್ಯನೆಂದು ಭಾವಿಸಿ, ವಿನೋದದಿಂದ ಆತನನ್ನು ತಮ್ಮ ಕೇರಿಗೆ ಬಾ—ಎಂದು ಕರೆಯುತ್ತಾರೆ.

**ಇರುಳು....ಮರಣವ ಮಾಡಿದ :**

ಹಿರಣ್ಯಕಶಿಪು ಬ್ರಹ್ಮನನ್ನು ಕುರಿತು ತಪಸ್ಸು ಮಾಡಿ ತನಗೆ ಹಗಲಿನಲ್ಲಿಯೂ

ಇರುಳಿನಲ್ಲಿಯೂ ಮರಣ ಬರಬಾರದೆಂದು ವರ ಪಡೆದಿರುತ್ತಾನೆ. ನರಸಿಂಹಾವತಾರಿಯಾದ ಶ್ರೀಹರಿ ಅವನನ್ನು ಸಂಜೆಯಲ್ಲಿ ಕೊಂದನು.

## ೫೫ನೆಯ ಹಾಡು

ಗೋಪವಧು ಒಬ್ಬಳು ತನ್ನನ್ನು ಸನ್ನೆಮಾಡಿ ಕರೆಯುವ ಬಾಲಕೃಷ್ಣನನ್ನು ಕುರಿತು ತನ್ನ ಸಖಿಯ ಮುಂದೆ ಆಡಿದ ಮಾತುಗಳಿವು.

೩ **ಧಟ್ಟಿದಿಗಿಲು**=ಗಾಬರಿಯಿಂದ ಎದೆ ಡವಡವ ಎನ್ನುವುದು.

## ೫೬ನೆಯ ಹಾಡು

ಕಣ್ಣುತಪ್ಪಿಸಿ ಮನೆಹೊಕ್ಕ ಬಾಲಕೃಷ್ಣನನ್ನು ಕುರಿತು ಗೊಲ್ಲತಿಯೊಬ್ಬಳು ಹೇಳಿದ ಮಾತುಗಳಿವು.

೧ **ಶೌರಿ**=( ಸಂ. ೩, ಪು. ೨೪೬ ).

೨ **ಇಂಬು**=ಹೆಚ್ಚಾಗಿ, ವ್ಯಾಪಕವಾಗಿ.

೩ **ಸಂಚಿತಾರ್ಥ**=ಕೂಡಿಟ್ಟ ವಸ್ತುಗಳು, ಸಂಚಿತ ಕರ್ಮಗಳು.

## ೫೭ನೆಯ ಹಾಡು

ಒಬ್ಬ ಗೋಪಳಿತಿ ಕೃಷ್ಣನ ಕಾಟಕ್ಕೆ ಬೇಸತ್ತು, 'ಎಲ್ಲಿ ಬೆಣ್ಣೆಯ ಬಚ್ಚಿಡುವೆನು' ಎಂದು ಕಳವಳದ ಮಾತುಗಳನ್ನಾಡಿದ್ದಾಳೆ.

೧ **ಥಾಳ**=ಪ್ರಕಾಶ.

೨ **ಎವೆಯಿಕ್ಕದಲ್ಲಿ**=ಇವನ ಕಣ್ಣಿಗೆ ಕಾಣದಂತೆ.

೩ **ಅಟ್ಟುಳಿ**=ಕಾಟ.

## ೫೮ನೆಯ ಹಾಡು

ಕಳ್ಳ ಕೃಷ್ಣನನ್ನು ಹಿಡಿಯಬೇಕೆಂದು ಹೊಂಚುಹಾಕಿದ ಗೊಲ್ಲತಿಯರು ಹೇಳಿದ ಮಾತುಗಳು ಈ ಹಾಡಿನಲ್ಲಿವೆ

೧ **ನಿರ್ಜರಪತಿ**=ದೇವತೆಗಳ ಒಡೆಯ.

**ಓಕುಳಿಯಾಡು**=ಸೂರೆಮಾಡು.

೩ **ಚಾಲುವರಿ**=ಹಂಬಲಿಸಿ ಬೇಡಿಕೊ.

## ೫೯ನೆಯ ಹಾಡು

ಬಾಲಕೃಷ್ಣನು ತನ್ನ ಕೈಗೆ ಸಿಕ್ಕಿದನೆಂದು ತುಂಬ ಉತ್ಸಾಹದಿಂದ ನೆರೆಯಾಕೆಗೆ ಒಬ್ಬ ಗೋಪಿಕೆ ಹೇಳುತ್ತಿದ್ದಾಳೆ.

೧ **ಮಂಡೆ**=ತಲೆ.

**ಬಣ್ಣವಸ್ತ್ರ**=ಸೀರೆ.

೨ **ಪಟ್ಟೆಮಂಚ**=ಪಟ್ಟೆಬಿಗಿಪು ಮಾಡಿದ ಮಾಡಿದ ಮಂಚ.

## ೬೧ನೆಯ ಹಾಡು

ಕೈಗೆ ಸಿಕ್ಕ ಕೃಷ್ಣನನ್ನು ಗೋವಳಿತಿಯೊಬ್ಬಳು ತಡೆದು ನಿಲ್ಲಿಸಿ, ಅವನಿಗೆ ಹೇಳಿದ ಮಾತುಗಳು ಈ ಹಾಡಿನಲ್ಲಿ ಇವೆ.

೧ **ಧುರದಿ**=ಧೈರ್ಯದಿಂದ.

೩ **ಇಟ್ಟಿಗೆಯ ಮೇಲೆ.... ಕಾರಣವೇನೊ**=( ಸಂ. ೧, ಪು. ೨೭೬ ).

## ೬೨ನೆಯ ಹಾಡು

ಬಾಲಕೃಷ್ಣನ ಕಿಡಿಗೇಡಿತನಕ್ಕೆ ಬೇಸತ್ತ ಗೋಪಿಯರು ಯಶೋದೆಯ ಬಳಿಗೆ ಬಂದು, ದೂರು ಹೇಳುವ ಮಾತುಗಳಿವು.

೧ **ವಾಸ**=ಬಟ್ಟೆ.

**ಭಾವಜನಯ್ಯ**=ಕಾಮನ ತಂದೆ.

೨ **ಅಪ್ಪ**=ಮಿಕ್ಕಿದವ, ಶ್ರೇಷ್ಠ.

**ಉಚ್ಛಿಷ್ಟ**=ಎಂಜಲು.

**ಇಷ್ಟದೇವರು :**

ಗ್ರಾಮದೇವರು, ಕುಲದೇವರು ಹಾಗು ಇಷ್ಟದೇವರೆಂಬ ಭೇದಗಳಿವೆ. ತಾನೇ ಸ್ವತಃ ಅರಿಸಿಕೊಂಡು, ನಡೆದುಕೊಳ್ಳುವ ದೇವತೆಗೆ ಇಷ್ಟದೇವತೆಯೆಂಬ ಹೆಸರಿದೆ.

೩ **ರಚ್ಚೆ**=ಗೊಂದಲ.

## ೬೩ನೆಯ ಹಾಡು

ಮತ್ತೊಬ್ಬ ಗೋಪಿಯು ದೂರಿದು.

೨ **ಬಟ್ಟೆ**=ಹಾದಿ,

೩ **ಕೇರಿಯ ಬಸವ**=ಗೂಳಿ.

## ೬೪ನೆಯ ಹಾಡು

ಮತ್ತೊಬ್ಬ ಗೋವಳಿತಿ ದೂರಿದ ಮಾತಿಗೆ ಯಶೋದೆ ಸಮಾಧಾನ ಹೇಳಿದ ಮಾತುಗಳು ಈ ಹಾಡಿನಲ್ಲಿವೆ.

೧ **ಕಾಕು**=ಕಿಡಿಗೇಡಿತನ.

**ಬಿಸರುಹ**=ಕಮಲ.

೨ **ಸಾಧಿಸು**=ಹಟಹಿಡಿ.

## ೬೫ನೆಯ ಹಾಡು

ಇದೂ ಗೊಲ್ಲತಿಯೊಬ್ಬಳ ದೂರು.

೧ **ರವಿಕೆ**=ಕುಪ್ಪಸ.

**ಪಟ್ಟೆ**=ರೇಶಿಮೆಯ ಸೀರೆ.

೩ **ಬೆಳ್ಳನ ತೋರು** ನುಗ್ಗು ಕೊಡಿರೆಂದು ಹೇಳು.

## ೬೬ನೆಯ ಹಾಡು

ಮತ್ತೊಬ್ಬಳ ದೂರು.

೪ **ಊರು ಮಾಡಿದ ಕೊಳಗ, ತಾಯಿ ಮಾಡಿದ ಹೊಟ್ಟೆ**=ಊರ ಹಿರಿಯರು ನಿರ್ಣಯಿಸಿದ ಅಳತೆ ಪಾತ್ರೆ. ( ತಾಯಿ ಉಣ್ಣಿಸಿದ ಪ್ರಮಾಣದಲ್ಲಿ ಮಗುವಿನ ಹೊಟ್ಟೆ ಚಿಕ್ಕದು–ದೊಡ್ಡದು. )

## ೬೭ನೆಯ ಹಾಡು

ಮತ್ತೊಬ್ಬ ಗೋವಳಿತಿಯ ದೂರು.

೧ **ಮೇಳದಿ**=ಗುಂಪು ಕಟ್ಟಿಕೊಂಡು.

## ೬೮ನೆಯ ಹಾಡು

ಗೊಲ್ಲಸ್ತ್ರೀಯರು ಗುಂಪುಗೂಡಿ ಬಂದು, ಯಶೋದೆಯ ಎದುರು ಶ್ರೀಕೃಷ್ಣನ ತುಂಟಾಟಗಳನ್ನು ವಿವರಿಸುತ್ತಾರೆ.

೧ **ಆಲದೆಲೆಯ**=ಆಲದೆಲೆಯ ಮೇಲೆ ಮಲಗಿದವ.

೨ **ಅನುಬಂಧ**=ಸಂಬಂಧಿಕ.

## ೬೯ನೆಯ ಹಾಡು

ಹಿಂದಿನ ಹಾಡಿನ ಭಾವವೇ ಮುಂದುವರಿದಿದೆ.

೧ **ಪೋಪೆವೆ**=ಹೋಗುತ್ತೇವೆ.

## ೭೦ನೆಯ ಹಾಡು

ಮುನಿಸುಗೊಂಡೊಬ್ಬ ಗೋಪಿ ಯಶೋದೆಯ ಮುಂದೆ ಸಿಡುಕು ನುಡಿಗಳನ್ನಾಡುತ್ತಾಳೆ.

## ೭೧ನೆಯ ಹಾಡು

ಇನ್ನೊಬ್ಬ ಗೋಪಿಯ ಕೋಪದ ಮಾತುಗಳಿವು.

೨ **ಉರೋಜ**=ಮೊಲೆ.

## ೭೨ನೆಯ ಹಾಡು

ಇದರಲ್ಲಿಯೂ ಗೋಪಿಯೊಬ್ಬಳ ದೂರನ್ನೇ ಕಾಣಬಹುದು.

೨ ಪಲಾಯನ ಮಾಡಿ ಕಾಲಯವನನ ಸುಟ್ಟ=( ಸಂ. ೧, ಪು. ೨೯೮ ).

೩ ಕಿಚ್ಚು ಪಾನವ ಮಾಡಿ=( ಭಾಗ ೧೦-೧೯ ).

೪ ಯಮಳಾರ್ಜುನರಾಯಾಸ ಬಿಡಿಸಿದ=( ಸಂ. ೩, ಪು. ೩೧೯ ).

## ೭೩ನೆಯ ಹಾಡು

ಗೋಪಿಕಾಸ್ತ್ರೀಯರ ದೂರು.

೧ ಕಣ್ಗಳನು ತೆರೆದು ನೋಡುವನು=ಮತ್ಸ್ಯವತಾರ.

೨ ಉದ್ದಂಡ ಕಠಿಣಕಾಯ=ಕೂರ್ಮಾವತಾರ.

೩ ಮೋರೆಯ ಬಾಗಿದನೆ=ವರಾಹಾವತಾರ.

೪ ಘೋರರೂಪ=ನರಸಿಂಹಾವತಾರ.

೫ ಬೇಡುವ ಜಲ ದೈನ್ಯದಿ=ವಾಮನಾವತಾರ.

೬ ಮಚ್ಚು ಕೊಡಲಿ ತೋರುವನೆ=ಪರಶುರಾಮಾವತಾರ.

೭ ಅಡವಿಗೆ ನಡೆದನೆ=ರಾಮಾವತಾರ.

೮-೯ ಕೃಷ್ಣಾವತಾರ.

೧೦ ಮದನಶಾಸ್ತ್ರವ ಪೇಳುತ=ಬೌದ್ಧಾವತಾರ.

ಕುದುರೆಯನ್ನೇರಿದನೆ ಕಲ್ಕ್ಯವತಾರ.

## ೭೪ನೆಯ ಹಾಡು

ಇನ್ನೊಬ್ಬ ಗೋಪಿ ಬಾಲೆ, ತನ್ನ ಮನಸನ್ನು ಹೇಳುತ್ತಾಳೆ.

೧ **ಅಟಿಕಾಲಿ** :

ಸೀಗೆ, ಅಂಟುವಾಳಕಾಯಿ, ಅರಿಸಿಣ ಎಣ್ಣೆ ಇವುಗಳ ಮಿಶ್ರಣ. ಎರಕೊಳ್ಳು-ವಾಗ ಇದನ್ನು ಮೈಗೆ ಹಚ್ಚಿ ತಿಕ್ಕಿಕೊಳ್ಳುವವರು.

೨ **ಮಲಕಿನ ತಳಕು**=ಹಗ್ಗದ ತೊಡಕು.

## ೭೫ನೆಯ ಹಾಡು

ಯಶೋದೆ ಗೋಪಿಯರನ್ನು ಕೇಳಿದ ಮಾತು.

## ೭೬ನೆಯ ಹಾಡು

ಇದು ಯಶೋದೆಯ ಮಾತು. ಗೊಲ್ಲಸ್ತ್ರೀಯರಿಗೆ ಸುಳ್ಳು ಮಾತನ್ನು ಹೇಳುವಿರೆಂದು ರೋಷಿ, ಯಶೋದೆ ಮಾತನಾಡುತ್ತಾಳೆ.

೧ **ಪಟ್ಟುಪಟ್ಟಿಗೆ**=ಬಾರಿಬಾರಿಗೆ.

೩ **ಮಾಲಗಂಬ**=ದೀಪಮಾಲೆಯ ಕಂಬ.

**ದಧಿಶೋಧಿಸಿ**=ಮೊಸರ ಕೆನೆ ತೆಗೆದು.

**ಸೆಟೆವಿ**=ಒಂದು ಕ್ಷುದ್ರ ದೇವತೆ.

೪ **ಹಲ್ಲೊಳಗೆ ಇಡು**=ಮೇಲಿಂದ ಮೇಲೆ ಬೈಯ್ಯು.

## ೭೭ನೆಯ ಹಾಡು

ಗೋಪಿಯರ ದೂರನ್ನು ಕೇಳಿ, ಬೇಸತ್ತ ಯಶೋದೆ ಶ್ರೀಕೃಷ್ಣನಿಗೆ ಆಡುವ ಮಾತುಗಳಿವು.

೩ **ಶೃಂಗಾರಮುಖ**=ಚೆಲುವ ಮೊಗ.

# ೨. ಗೋಪೀಪ್ರೇಮಲೀಲೆ

## ೬೮ನೆಯ ಹಾಡು

ಈ ಸುಳಾದಿಯಲ್ಲಿ ದಾಸರು ಬಾಲಕೃಷ್ಣನ ಲೀಲೆಗಳನ್ನು ವಿವಿಧರೀತಿಯಲ್ಲಿ ಬಣ್ಣಿಸಿ ಹೇಳಿದ್ದಾರೆ.

೧ **ರಶನೆ**=ನಡುಗೆಜ್ಜೆ.

**ಪಯೋಬ್ಧಿಶಯನ**=ಕ್ಷೀರಸಾಗರಶಯನ.

೩ **ಕಕ್ಕಿ**=ಕೊಕ್ಕೆಂದು ಸಪ್ಪಳ ಮಾಡಿ.

**ಬಿಸಳಿಗೆ**=ಪಾತ್ರೆಯ ಒಂದು ಜಾತಿ.

**ಕುಶಲವಾಡಿ**=ವಿನೋದ ಮಾತಾಡಿ.

೫ **ಉತ್ತರಿಸು**=ದಾಟಿಸು.

೬ **ಕ್ರತು**=ಯಜ್ಞ.

೭ **ಉಪಾಧಿ**=ಅಜ್ಞಾನದ ಆವರಣ.

**ವಿಪದ**=ವಿಶೇಷವಾದ ಪದ (ಸ್ಥಾನ).

**ಶಿವ**=ಮಂಗಲಕರನಾದ ಪರಮಾತ್ಮ.

ವಿ. ಸೂ:— ದ್ವೈತ ತತ್ತ್ವಜ್ಞಾನದಲ್ಲಿ ಪರಮಾತ್ಮನನ್ನು ಬಿಟ್ಟು ಉಳಿದ ಎಲ್ಲ ದೇವತೆಗಳೂ ಸೋಪಾಧಿಕರು.

## ೬೯ನೆಯ ಹಾಡು

ಗೋವಳಿತಿಯೊಬ್ಬಳು ಮಾರಾಟಕ್ಕೆಂದು ಹಾಲ ಹರವಿಯನ್ನು ಹೊತ್ತುಕೊಂಡು ಕೇರಿಯಲ್ಲಿ ಬಂದಾಗ, ಕೃಷ್ಣನು ಅವಳನ್ನು ಕಂಡು ಮಾತನಾಡುತ್ತಾನೆ.

೧ **ಚಂದ್ರಗಾವಿ (ಚಂದ್ರ-ಕಾವಿ)**=ಚಿತ್ರಳೆ ಬಣ್ಣದ ಸೀರೆ.

**ರುಳಿ**=ಸರಪಣಿ.

**ಪೀಳಿಪ್ರಸ್ತ**=[illegible].

೨ **ಮಂಡಲವಾಳುವ**=ಮಂಡಲೇಶ್ವರನಾದ.

೩ **ಹಂಬು**=ಬಳ್ಳಿ.

**ತಳವಾರ**=ಕಾವಲುಗಾರ. ( Police-man ).

೫**ಕಾಲಮೊದಲು**=ಈ ಮೊದಲು.

## ೮೦ನೆಯ ಹಾಡು

ಕೃಷ್ಣನನ್ನು ಕಂಡ ಗೋವಳಿತಿಯೊಬ್ಬಳು, ಇನ್ನೊಬ್ಬಳನ್ನು ಇವನಾರೆಂದು ಕೇಳುತ್ತ, ಅವನ ಅಂಗಾಂಗಳನ್ನು ಬಣ್ಣಿಸುತ್ತಾಳೆ.

೩ **ನೀರದ**=ಮೋಡ.

**ಕೇಯೂರ**=ಭುಜಕೀರ್ತಿ.

**ನಿರ್ಜರರು**=ದೇವತೆಗಳು.

೫ **ಕಂಬುಕಂಧರ**=ಶಂಖದಂತೆ ಕೊರಳುಳ್ಳವ.

## ೮೧ನೆಯ ಹಾಡು

ಗೋಪವಧುವೊಬ್ಬಳು ಶ್ರೀಕೃಷ್ಣನ ಸಾಹಚರ್ಯವನ್ನು ಹಾರಯಿಸಿ ತನ್ನಲ್ಲಿಯೆ ತಾನು ಹೀಗೆ ಎಂದುಕೊಳ್ಳುತ್ತಾಳೆ.

೧ **ಗಾಡಿಕಾರ**=ಸುಂದರ.

೨ **ಅರಸಂಚೆ** ( **ಅರಸು**+**ಅಂಚೆ** )=ರಾಜಹಂಸ.

**ಶಿರವ ತಗ್ಗಿಸುವಂತೆ**=ನಾಚಿ ತಲೆ ಬಾಗಿಸುವಂತೆ.

೩ **ಚೆಲ್ಲೆಗಂಗಳು**=ವಿಸ್ತಾರವಾದ ಕಣ್ಣುಗಳು.

೪ **ಸಂಗಡಿಸು**=ಒಟ್ಟಾಗಿ ಸೇರಿಸು.

೫ **ಮುರುಕಿ**=ಡೂಗಿ.

## ೭೨ನೆಯ ಹಾಡು

ಗೊಲ್ಲತಿಯರು ಕೃಷ್ಣನನ್ನು ಕರೆಯುತ್ತಿದ್ದಾರೆ.

೧ **ಬಾಣನ ಭಂಜಿಸಿದಂಥ**=(ಸಂ. ೩. ಪು. ೩೨೨).

## ೭೩ನೆಯ ಹಾಡು

ಕೃಷ್ಣನ ಸಾಹಸಚರ್ಯವನ್ನು ಸದಾಕಾಲ ಬಯಸುವ ಗೊಲ್ಲತಿಯೊಬ್ಬಳು ತನಗೆ ಒದಗಿದ ತೊಡಕು, ತೊಂದರೆಗಳನ್ನು ನಿವೇದಿಸುತ್ತಾಳೆ.

೧ **ಉದ್ದಂಡ**=ದುಷ್ಟ.

## ೭೪ನೆಯ ಹಾಡು

ಮನೆಗೆ ಬಂದ ಕೃಷ್ಣನನ್ನು ರಹಸ್ಯವಾಗಿ ಕಂಡು, ಒಬ್ಬ ಗೋವಳಿತಿ ಗದ್ದಲ ಮಾಡಬೇಡವೆಂದು ಅವನನ್ನು ಬೇಡಿಕೊಳ್ಳುತ್ತಾಳೆ.

೩ **ನಾಡ ಮಾತು**=ಸಲ್ಲದ ಮಾತು.

**ಪಾಡುಪಂಥ**=ಈರ್ಷೆಯ ಮಾತು.

## ೭೫ನೆಯ ಹಾಡು

ಇನ್ನೊಬ್ಬ ಗೋವಳಿತಿ ಹುಸಿಮುನಿಸಿನಿಂದಿದ್ದ ಕೃಷ್ಣನನ್ನು ಸಂತವಿಟ್ಟು ಕರೆ-ಯುತ್ತಾಳೆ.

೧ **ಮಾವನ ಅಳಿಯ**=ಕಂಸನ ತಂಗಿಯ ಮಗ.

**ಭಾವನತನಯ**=ಕಂಸನಿಗೆ ಭಾವನಾದ ವಸುದೇವನ ಮಗ.

**ಮಾವನ ಮಡದಿಯು** ವಸುದೇವನ ಮಾವನಾದ ದೇವಕನ ಹೆಂಡ-ತಿಯು.

**ಮಗಳ**=ಹೆಂಡತಿಯು.

**ಸೊಸೆಯು**=ರುಕ್ಮಿಣಿಯು.

೨ **ಅತ್ತಿಗೆಯ ಮೈದುನ**=ರೇವತೀದೇವಿಯ ಮೈದುನ.

**ಅತ್ತಿಗೆಯ ಮಗಳ ಗಂಡ**=ದೇವಕಿಯ ಅತ್ತಿಗೆಯಾದ ರಾಜಾಧಿದೇವಿಯ ಮಗಳಾದ ಮಿತ್ರವಿಂದಾ ಎಂಬವಳ ಗಂಡ.

**ಅತ್ತಿಗೆಯ ಪುತ್ರಿಯ** = ವಸುದೇವನ ತಂಗೆಯಾದ ಶ್ರುತಕೀರ್ತಿಯ ಮಗಳ.

## ೬ ಕಾಲಿಯಮರ್ದನ

### ೮೬ನೆಯ ಹಾಡು

ಈ ಹಾಡಿನಲ್ಲಿ ಶ್ರೀಕೃಷ್ಣನು ಕಾಲಿಯ ಸರ್ಪವನ್ನು ಮರ್ದನ ಮಾಡಿದ ಕಥೆಯು ವಿಸ್ತೃತವಾಗಿ ಬಂದಿದೆ.

೧ **ತಡಿ**=ದಂಡೆ.

**ಘುಂಘುರ**=ಗೆಜ್ಜೆ, ಕಿರುಗಂಟೆ.

**ಘನಸಾರ**=ಶ್ರೀಗಂಧ.

**ಚರ್ಚಿಸಿ**=ಲೇಪಿಸಿಕೊಂಡು.

**ತೊಡರು**=ಆಭರಣ.

**ಚಿನ್ನಣಿ**=ಬಂಗಾರದ ಗೆಜ್ಜೆ.

೨ **ಕೊಂಡಾಲತಿಮ್ಮ**=ಕೃಷ್ಣನ ಗೆಳೆಯರಲ್ಲಿ ಒಬ್ಬ. (ಕಾಲ್ಪನಿಕ ವ್ಯಕ್ತಿ.)

**ಮಿಂಡೆ**=ಯುವತಿ.

**ದಿಂಡೆಯರು**=ತುಂಟ ಗೆಳೆಯರು.

೩ **ಕಳಕಳಿಸು**=ನಗು.

೪ **ಬಾಯನಾವದಿಂದ**=ಗೋಳಾಡುತ್ತ.

**ವಿಗಡೆ**=ದುಃಖಾರ್ತೆ.

**ದಗದಗಿಸು**=ಸಂತಾಪವಾಗು.

**೫ ಸಮಪಾದವಿಟ್ಠಲ** :

ಪಂಢರಪುರದಲ್ಲಿಯ ವಿಟ್ಠಲ ಮೂರ್ತಿ ಎರಡೂ ಪಾದಗಳನ್ನು ಜೋಡಿಸಿ ನಿಂತಿದೆ. ಶಿಲ್ಪಶಾಸ್ತ್ರದಲ್ಲಿ ಮೂರ್ತಿಗಳನ್ನು ಕಲ್ಪಿಸುವ ವಿಧಾನಗಳು ಐದು ತೆರನಾಗಿವೆ. ೧. ಏಕಭಂಗ, ೨. ದ್ವಿಭಂಗ, ೩. ತ್ರಿಭಂಗ, ೪ ಸಮಪಾದ, ೫ ಅಭಂಗ.

ಸಮಚರಣ ಸರೋಜಂ ಸಾಂದ್ರನೀಲಾಂಬುದಾಭಂ ।
ಜಘನನಿಹಿತಪಾಣಿಂ ಮಂಡನಂ ಮಂಡನಾನಾಂ ॥
ತರುಣತುಲಸಿಮಾಲಾ ಕಂಧರಂ ಕಂಜನೇತ್ರಂ ।
ಸದಯಧವಲಹಾಸಂ ವಿಟ್ಠಲಂ ಚಿಂತಯಾಮಿ ॥

ಈ ನುಡಿಯಲ್ಲಿ ದಶಾವತಾರದ ವರ್ಣನೆ ಇದೆ.

**ಕಣ್ಣೆತ್ತಿ ನೋಡನು**=ಮತ್ಸ್ಯಾವತಾರ.

**ಕಡೆಗೋಲ ಬೆನ್ನಲಿ ಪಿಡಿದನು**=ಕೂರ್ಮಾವತಾರ.

**ಹಲ್ಗಳಸೂರಿ ಮಣ್ಣ ಕಚ್ಚಲು**=ವರಾಹಾವತಾರ.

**ಬಾಯಿ ತೆರೆಯುವನು**=ನರಸಿಂಹ

**ಮಣ್ಣ ಬೇಡಲು**=ವಾಮನಾವತಾರ.

**ಎನ್ನ ಕುತ್ತಿಗೆಯ ಕೊಯ್ವರೆ**=ಪರಶುರಾಮಾವತಾರ.

**ಮಾತೆಯ.... ಪೋಷರೆ**=ರಾಮಾವತಾರ.

**ಬಲಭದ್ರ.... ತೋರೆ**=ಕೃಷ್ಣಾವತಾರ.

೬ **ಮಾಂಗಲ್ಯದ ಚೆಂದ ಕಾಯು**=ಮುತ್ತೈದೆತನ ಕಾಯು.

೯ **ಕಂತುಕ**=ಚೆಂಡು.

## ೮೭ನೆಯ ಹಾಡು

ಕಾಳಿಯ ಮರ್ದನದ ಬಣ್ಣನೆಯು ಮತ್ತೊಂದು ರೀತಿಯನ್ನು ಈ ಹಾಡಿನಲ್ಲಿ ನೋಡಬಹುದು. ಇದರಲ್ಲಿ ಹೆಚ್ಚಾಗಿ ಶ್ರೀಕೃಷ್ಣನ ನರ್ತನದ ವಿವಿಧ ರೀತಿಗಳನ್ನು ವರ್ಣಿಸಲಾಗಿದೆ.

## ೮೮ನೆಯ ಹಾಡು

೧ **ಮೇಲುಸುರದನ್ನ**=ಮೇಲೆ ಶಾಕದಂತೆ.

**ಭಾಮೆ**=ಲಕ್ಷ್ಮೀದೇವಿ.

**ಎಳಸು**=ಅಪೇಕ್ಷಿಸು.

**ಅಂಕದರ್ಪ**=ಹೆಚ್ಚಿನ ಅಭಿಮಾನ.

## ೮೯ನೆಯ ಹಾಡು

ಒಬ್ಬ ಗೊಲ್ಲತಿ ಬಂದು, ಕಾಲಿಯ ಮರ್ದನ ಮಾಡಿದ ಕೃಷ್ಣನಿಗೆ ಇನ್ನು ಮೇಲೆ ಹೀಗೆ ಮಾಡದಂತೆ ಬುದ್ಧಿ ಹೇಳಬೇಕೆಂದು ಬೇಡಿಕೊಳ್ಳುತ್ತಾಳೆ.

೧ **ಧಿಟ್ಟ....ಮುಚ್ಚನೆ**=ಮತ್ಸ್ಯಾವತಾರ.

**ಬೆಟ್ಟಕೆ....ನಿಂತನೆ**=ಕೂರ್ಮಾವತಾರ.

**ಸಿಟ್ಟಿ....ತಂದನೆ**=ವರಾಹಾವತಾರ.

**ಗಟ್ಟಿ ಉಕ್ಕಿನ....ಬಂದನೆ**=ನರಸಿಂಹಾವತಾರ.

೨ **ಮೂರಡಿ....ಬೇಡಿದನೆ**=ವಾಮನಾವತಾರ.

**ನೃಪರ....ಪಿಡಿದನೆ**=ಪರಶುರಾಮಾವತಾರ.

**ನಾರ....ಬಂದನೆ**=ರಾಮಾವತಾರ.

**ಚೋರ....ತಿಂದನೆ**=ಕೃಷ್ಣಾವತಾರ.

೩ **ಬತ್ತಲೆ....ಅಪ್ಪಿದ**=ಬೌದ್ಧಾವತಾರ.

**ನಾರಿಯರು**=ತ್ರಿಪುರರ ಸತಿಯರು.

**ಉತ್ತಮ....ಹತ್ತಿದ**=ಕಲ್ಕ್ಯವತಾರ.

## ೭. ವೇಣುನಾದಲೀಲೆ

### ೯೦ನೆಯ ಹಾಡು

ಗೊಲ್ಲತಿಯೊಬ್ಬಳು 'ವೃಂದಾವನದಲ್ಲಿ ವಿಹಾರಮಾಡುವ ವಂಶೀಧರ ಕೃಷ್ಣನನ್ನು ನೋಡೋಣ ಬಾ' ಎಂದು ಕರೆಯುವ ಮಾತುಗಳು ಈ ಹಾಡಿನಲ್ಲಿವೆ.

೧ **ಅರುಣಪಲ್ಲವ**=ಕೆಂಪುಚಿಗುರು.

**ಮರಕತ**=ಪಚ್ಚೆ.

೨ **ಹಾರಹೀರ**=ವಜ್ರದಹಾರ.

**ಸಾರಶರೀರ**=ತುಂಬಿದ ಮೈ.

**ಮನೋದೂರ**=ಮನಸ್ಸಿಗೆ ತಿಳಿಯದಂತಹವನು (ಅಗಮ್ಯ).

### ೯೧ನೆಯ ಹಾಡು

ಇನ್ನೊಬ್ಬ ಗೋವಳಿತಿ ತನ್ನ ಗೆಳತಿಯನ್ನು, ಶ್ರೀಕೃಷ್ಣನನ್ನು ನೋಡಲು ಕರೆದುದು ಈ ಹಾಡಿನಲ್ಲಿದೆ.

೧ **ಘನ**=ಮೋಡ.

**ಕನಕಾಂಬರ**=ಪೀತಾಂಬರ, ಹೊಂಬಟ್ಟೆ.

೨ **ವನಜ**=ಕಮಲ.

### ೯೨ನೆಯ ಹಾಡು

ಈ ಸುಳಾದಿಯಲ್ಲಿ ಪರಮಾತ್ಮನು ಅಂಗುಷ್ಠಮಾತ್ರ ರೂಪವುಳ್ಳವನೆಂದು ಕಾಠಕ ಉಪನಿಷತ್ತಿನಲ್ಲಿ ಹೇಳಿದುದನ್ನು ದಾಸರು ವಿವರಿಸಿದ್ದಾರೆ. ಪರಮಾತ್ಮನು ಈ ರೂಪವುಳ್ಳವನಾದ್ದರೂ, ಬೇರೆ ಬೇರೆ ಭಕ್ತರಿಗೆ ಬೇರೆ ಬೇರೆ ರೂಪದಲ್ಲಿ ಕಾಣಿಸಿಕೊಳ್ಳುತ್ತಾನೆ. ಪರಮಾತ್ಮನು ತಮಗೆ ಉಡುಪಿಯ ಕೃಷ್ಣನ ರೂಪದಲ್ಲಿ ಕಾಣಿಸಿಕೊಂಡದ್ದನ್ನು ದಾಸರು ವರ್ಣಿಸಿದ್ದಾರೆ.

ಅಂಗುಷ್ಠ ಮಾತ್ರಃ ಪುರುಷೋ ಮಧ್ಯ ಆತ್ಮನಿ ತಿಷ್ಠತೇ ।
ಈಶಾನೋ ಭೂತಭವ್ಯಸ್ಯ ನತತೋ ವಿಜುಗುಪ್ಸತೇ ॥

ಏತದ್ವೈತತ್ (ಕಾಠಕ, ಅಧ್ಯಾಯ ೨, ವಲ್ಲಿ ೧)

೧ **ಕಂಡುಕಂಡು ಅರಸಿಕೊಂಬ**=ಪರಮಾತ್ಮನ ಸ್ವರೂಪವು ತಿಳಿದು ತಿಳಿದೂ ಮತ್ತೂ ತಿಳಿಯದಂತೆ ಆಗಿ, ಹುಡುಕಿಸಿಕೊಳ್ಳುವ.

**ಬಿಂಬಮೂರುತಿ**=ಪರಮಾತ್ಮನು ಬಿಂಬಸ್ವರೂಪನು.

**ಜೀವದಾಕಾರ ಮೂರುತಿ** = ಬೇರೆ ಬೇರೆ ಜೀವಿಗಳಲ್ಲಿ ಬೇರೆ ಬೇರೆ ಜೀವಿಗಳಾಕಾರದಲ್ಲಿ ಇರುವವನು.

೨ **ಪ್ರಬಂಧಗೀತ**=ಸಂಗೀತಯೋಗ್ಯ ಗೀತಗಳು.

**ಗೋಪಿ**=ಯಶೋದೆ.

**ವ್ರಜ**=ಗೋಕುಲ.

೩ **ಪೊಂಬಟ್ಟೆ**=ಪೀತಾಂಬರ.

**ಒರೆ**=ತುಂಬು.

**ಕುಡು**=ಕಳವುಮಾಡು.

೪ **ಜಾತಿ**=ಸಂಗೀತದ ಮೂಲ ಸಪ್ತಸ್ವರಗಳು.

**ಮೂರ್ಛನಾ**=ಸ್ವರಸೌಂದರ್ಯದ ಸ್ಥಾಯಿತ್ವ.

ವಿ. ಸೂ. :— ಈ ನುಡಿಯ ಮೊದಲಿನ ಎರಡು ಸಾಲುಗಳ ಅರ್ಥವು ಸ್ಪಷ್ಟವಾಗುವುದಿಲ್ಲ.

**ಕಡೆವ ನೇಣು**=ಕಡೆಗೋಲಿನ ಹಗ್ಗ.

## ೯೩ನೆಯ ಹಾಡು

ಶ್ರೀಕೃಷ್ಣನು ಕೊಳಲನ್ನೂದಿದಾಗ ನಿಸರ್ಗದಲ್ಲಿ ನಡೆದ ಸ್ಥಿತ್ಯಂತರಗಳನ್ನು ದಾಸರು ಈ ಹಾಡಿನಲ್ಲಿ ವಿವರ-ವಿವರವಾಗಿ ಹೇಳಿದ್ದಾರೆ.

೧ **ಚೈತನ್ಯಮರೆತು**=ಸಂಪೂರ್ಣವಾಗಿ ಮೈಮರೆತು.

**ತೀಡು**=ಬೀಸು.

**ಮಾರುತ ಮಂದಗತಿಗೊಳ್ಳೆ**=ಮಂದಮಾರುತನಾಗಲು.

**ಬರಲು**=ಒಣಗಿದ ಗಿಡ-ಬಳ್ಳಿಗಳು.

**ಹೇಡಿಗೊಳ್ಳು**=ನಿಸ್ಸತ್ತ್ವವಾಗು.

**ಜಕ್ಕವಕ್ಕಿ**=ಚಕ್ರವಾಕ.

**ವೈರಾಟ**=ಹಗೆತನ.

**೨ ಒಡ್ಡು**=ವ್ಯಾಪಿಸು.

**ನಳಿನ**=ಕಮಲ.

**ಚಂಪಕ**=ಸಂಪಿಗೆ.

**ನಾಗ**=ಎಲೆಯ ಬಳ್ಳಿ.

**ಪುನ್ನಾಗ**=ಕರಿಯ ಎಲೆಬಳ್ಳಿ.

**ಪಾಟಲ**=ಪಾದರಿ.

**೩ ಒಡಲಾಸೆ**=ಕರುವಿನ ಪ್ರೀತಿ.

**ನೀಂಟಿಸಿ**=ನೇರವಾಗಿ ಮಾಡಿ.

**೪ ಬುದ್ಧಿ ಸೂರಾಡಿ**=ಸಂಭ್ರಾಂತರಾಗಿ.

**ಗದ್ದಿಗೆಯರಸ**=ಸರ್ವಶ್ರೇಷ್ಠನಾದ ಶ್ರೀಕೃಷ್ಣ.

**೫ ಮಧುಕುಂಜವನ**=ವೃಂದಾವನದ ಒಂದು ಭಾಗ.

**ತ್ರಿಭಂಗಿ**=ಮೂರು ಕಡೆಗೆ ಮಣಿದು ನಿಲ್ಲುವ ರೀತಿ.

**ಹೇಮಾಂಬರ**=ಪೀತಾಂಬರ.

**ರಾಮಕ್ರಿ, ಗುಂಡಕ್ರಿ, ಮೇಘರಂಜಿನಿ**=ಇವು ಕರ್ನಾಟಕಿ ಸಂಗೀತದ ಮೂರು ಘನರಾಗಗಳು

## ೯೪ನೆಯ ಹಾಡು

ಇದರಲ್ಲಿಯೂ ಶ್ರೀಕೃಷ್ಣನು ಕೊಳಲನ್ನೂದಿದ ಬಣ್ಣನೆಯು ಇದೆ.

೧ **ನಳಿನಜಾಂಡ**=ಬ್ರಹ್ಮಾಂಡ.

**ನೆಗಹು**=ನಿಲ್ಲುವಿಕೆ.

೨ **ಕಳೆಯ**=ಕಳೆಯುಳ್ಳ, ಹೊಳೆಯುವ.

**ಮಲಯಜ**=ಗಂಧ.

೩ ಮಾರವಿ, ದೇಶಿ, ಗುರ್ಜರಿ, ಭೈರವಿ, ಗೌರಿ, ನಾಟಿ, ಸಾವೇರಿ, ಆಹೇರಿ, ಪೂರ್ವಿ, ಕಾಂಬೋದಿ, ಪಾಡಿ, ದೇಶಾಕ್ಷಿ, ಶಂಕರಾಭರಣ, ಪೂರವಕಲ್ಯಾಣಿ, ವಸಂತ, ತೋಡಿ, ವರಾಳಿ, ಗುಂಡಕ್ರಿ, ಸಾರಂಗ, ಸಾಳಗ, ಸೋರಟಿ, ಭೂಪಾಳಿ ಮತ್ತು ಶ್ರೀರಾಗ—ಕರ್ನಾಟಕ ಸಂಗೀತದ ಘನರಾಗಗಳು.

೪ **ಶರಭ**=ಎಂಟು ಕಾಲಿನ ಕಾಲ್ಪನಿಕ ಪ್ರಾಣಿ.

೫ **ಪುರರಿಪು**=ಶಿವ.

## ೯೫ನೆಯ ಹಾಡು

ದಾಸರು ಮುರಲೀನಾದಮುಗ್ಧೆಯರಾದ ಗೋಗುಲದ ಗೊಲ್ಲ ನಾರಿಯರ ಸಂಭ್ರಾಂತಭಾವವನ್ನು ಈ ಹಾಡಿನಲ್ಲಿ ವಿನೋದವಾಗಿ ಬಣ್ಣಿಸಿದ್ದಾರೆ.

೨ **ಸಾತ್ತ್ವತ**=ಕೃಷ್ಣ (ಸತ್ತ್ವತನ ವಂಶದವ).

೪ **ಸಟ್ಟುಗ**=ಹುಟ್ಟು.

**ತೊಳಸು**=ಥಳಿಸು, ಕುಟ್ಟು.

**ಓಗರ**=ಅನ್ನ.

೫ **ಮಡ್ಡಿ**=ದನಕ್ಕೆ ತಿನಿಸಲು ಕಾಳನ್ನು ಕುಚ್ಚಿಮಾಡಿದ ಒಂದು ಪದಾರ್ಥ.

**ಎಡೆಮಾಡು**=ಊಟಕ್ಕೆ ಬಡಿಸು.

೮ **ಚೌರಿ**=ಚೌರಿಯ ಕೂದಲು, ಗಂಗಾವನ.

೯ **ಗಟ್ಟಿಕಂಕಣ**=ಪಾಟ್ಲಿ, ಗೋಟು ಮುಂ.

## ೯೬ನೆಯ ಹಾಡು

ಶ್ರೀಕೃಷ್ಣನು ಜಲಕ್ರೀಡೆಯನ್ನಾಡಿದ ರೀತಿಯು ಈ ಹಾಡಿನಲ್ಲಿ ವರ್ಣಿತ-ವಾಗಿದೆ.

೧ **ಅಳಿಗಂಧ**=ಹೂವಿನ ಹುಡಿ ( ಅಳಿಗಳ ಗಂಧ ).

## ೮. ಗೋಕುಲನಿರ್ಗಮನ

## ೯೭ನೆಯ ಹಾಡು

ಬಿಲ್ಲುಹಬ್ಬಕ್ಕೆಂದು ಶ್ರೀಕೃಷ್ಣನನ್ನು ಕರೆಯಲು ಅಕ್ರೂರನು ಮಧುರೆಯಿಂದ ಗೋಕುಲಕ್ಕೆ ಬಂದನು. ಅತ ಬಂದಿರುವನೆಂಬ ಸುದ್ದಿಯನ್ನು ಕೇಳಿ ಗೋಪಿಕಾ ಸ್ತ್ರೀಯರು, ತಮ್ಮತಮ್ಮೊಳಗೆ ಮಾತನಾಡಿಕೊಳ್ಳುವ ಹಾಡಿದು.

## ೯೮ನೆಯ ಹಾಡು

ಒಬ್ಬ ಗೋವಳಿತಿ ತನ್ನ ಕಾತರಭಾವವನ್ನು ಈ ರೀತಿ ಹೊರಕ್ಕೆ ಹಾಕು-ತ್ತಾಳೆ.

೧ **ಹೊಕ್ಕುಬಳಕೆ**=ವಿಶೇಷ ಗುರುತು.

೨ **ನಿಗಳ**=ಬೇಡಿ.

೩ **ಅತ್ತೆಯ ಮಕ್ಕಳಂತೆ :**

ಪಾಂಡವರು ಕೃಷ್ಣನ ಸೋದರತ್ತೆಯಾದ ಕುಂತಿಯ ಮಕ್ಕಳು. ಕುಂತಿ ಮತ್ತು ವಸುದೇವ ಒಂದೇ ಹೊಟ್ಟೆಯಲ್ಲಿ ಹುಟ್ಟಿದವರು.

೪ **ಅಲ್ಲಿ**=ಮಧುರೆಯಲ್ಲಿ.

**ಅರಸನ**=ಕಂಸನ.

**ಕಳ್ಳಕಪಟ**=ಒಳಸಂಚು.

## ೯೯ನೆಯ ಹಾಡು

ಶ್ರೀಕೃಷ್ಣನು ಮಧುರೆಗೆ ಹೊರಟು ರಥದಲ್ಲಿ ಕುಳಿತುದನ್ನು ಕಂಡ ಗೋಪ ಸ್ತ್ರೀಯೊಬ್ಬಳು, ತನ್ನ ಕರುಣಾಭಾವವನ್ನು ಈ ಪದ್ಯದಲ್ಲಿ ಹೊರಗೆ ಹಾಕಿದ್ದಾಳೆ.

೧ **ಅರ್ಥಿ**=ಹುರಿಯಾಳು.

೩ **ಕಥಿಜನಾಭ**=ಕಥಿಜ ಎಂಬುದರ ಅರ್ಥ ಆಗುವುದಿಲ್ಲ. ಕೋಶ-ದಲ್ಲಿ ಈ ಶಬ್ದವಿಲ್ಲ.

## ೧೦೦ನೆಯ ಹಾಡು

ಇನ್ನೊಬ್ಬ ಗೋವಳಿತಿ ಕೃಷ್ಣನ ಅಗಲಿಕೆಯನ್ನು ನೆನೆದು ಹಲುಬುತ್ತಾಳೆ.

ವಿ. ಸೂ.— ಕೃಷ್ಣನು ನಮ್ಮೊಡನೆ ಇರುವತನಕ ಗೋಕುಲದಲ್ಲಿಯ ನಿಸರ್ಗದ-ಲ್ಲೆಲ್ಲ ಸೌಂದರ್ಯವು ತುಂಬಿರುತ್ತಿತ್ತು— ಎಂಬುದು ಆಕೆಯ ಭಾವ.

೨ **ಎಡೆಮಾಡಿ**=ತನ್ನ ರಥದಲ್ಲಿ ಸ್ಥಾನವನ್ನು ಕೊಟ್ಟು.

**ವಕ್ರಮಾರ್ಗವ ಕೂಡಿ**=ಸರಳ ರೀತಿಯನ್ನು ಬಿಟ್ಟು.

**ಉಸಿರೆಣಿಸಿ**=ಕಳವಳವನ್ನು ತಿಳಿದುಕೊಂಡು.

## ೧೦೧ನೆಯ ಹಾಡು

ಮತ್ತೊಬ್ಬ ಗೋವಳಿತಿ ಶ್ರೀಕೃಷ್ಣನ ಅಗಲಿಕೆಯ ದುಃಖದಿಂದ— ಗೋಕುಲವೇ ವಾಸಕ್ಕೆ ಯೋಗ್ಯವಲ್ಲವೆಂಬ— ತನ್ನ ಹಂಬಲವನ್ನು ತೋಡಿಕೊಳ್ಳುತ್ತಾಳೆ.

೬ **ಪೂಸರಳು**=ಕಾಮನ ಹೂಬಾಣ.

೮ **ಅಂತರಂಗದಾಸೆ**=ಉತ್ಕಟ ಪ್ರೇಮ.

## ೧೦೨ನೆಯ ಹಾಡು

ಬಿಲ್ಲುಹಬ್ಬದಲ್ಲಿ ಶ್ರೀಕೃಷ್ಣನು ಎಲ್ಲ ಪಣಗಳನ್ನೂ ಜಯಿಸಿ, ಮಾವ ಕಂಸ-ನನ್ನು ಸಂಹರಿಸಿ, ವಸುದೇವ-ದೇವಕಿಯರ ಸೆರೆ ಬಿಡಿಸಿದನು. ತಾಯಿಯ ಅಪೇಕ್ಷೆ-ಯಂತೆ ಆತನು ಮಧುರೆಯಲ್ಲಿಯೇ ನಿಂತುಕೊಂಡನು. ಆದರೂ ಗೋಪಿಯರ

ಯೋಗಕ್ಷೇಮದ ವಿಚಾರ ಆತನನ್ನು ಬಿಡಲಿಲ್ಲ. ಆತನು ಉದ್ಧವನನ್ನು ಗೋಕುಲಕ್ಕೆ ಕಳಿಸಿ, ಗೋಪಿಕಾಸ್ತ್ರೀಯರ ಇರವನ್ನು ತಿಳಿದುಕೊಂಡು ಬರುವುದಕ್ಕಾಗಿ ತಿಳಿಸಿದಾಗ, ಗೋಪಿಕಾಸ್ತ್ರೀಯರು ಉದ್ಧವನನ್ನು ಕುರಿತು ಆಡಿದ ಮಾತುಗಳು.

೧ **ಬಿಲ್ಲುಬಿಳಿಯ**=ಜೆಗ್ಗಬ್ಬು ಬಿಲ್ಲಾದವ, ಕಾಮ.

**ಬೇಟ**=ವಿರಹ.

೨ **ಮನಸಿಜಪಿತ**=ಕೃಷ್ಣ.

೩ **ಕೋವಿದ**=ಚತುರ.

## ೯. ವಿವಿಧಭಾವಲೀಲೆ

### ೧೦೩ನೆಯ ಹಾಡು

ತನ್ನನ್ನು ಮರೆತೆ ಏಕೆ?—ಎಂದು ಕೇಳುವ ಭಕ್ತ ಪರ್ಯಾಯವಾಗಿ ಶ್ರೀಕೃಷ್ಣನ ಬಾಲಲೀಲೆಗಳನ್ನು ಬಣ್ಣಿಸುತ್ತಾನೆ.

೧ **ಕಲ್ಲಿಯ ಚೀಲ**=ಹೆಣಿಕೆಯ ಚೀಲ.

೨ **ಕಲ್ಲುಮಣೆ**=ಗೊಟ್ಟಿಗುಣಿಯ ಆಟ.

**ಕವಡಿಚೆನ್ನೆ**=ಕವಡಿಯಿಂದಾಡುವ ಗೊಟ್ಟಿಗುಣಿ ಆಟ.

### ೧೦೪ನೆಯ ಹಾಡು

ತನ್ನ ಬೇಡಿಕೆಯನ್ನು ಮನ್ನಿಸದ ಪರಮಾತ್ಮನನ್ನು ಭಕ್ತ, ದಶಾವತಾರದ ಲೀಲೆಗಳಿಂದ ಅಣಕವಾಡುತ್ತಾನೆ.

೧ **ಜಲದಿ ಕಣ್ಣಬಿಡು**=ಮತ್ಸ್ಯಾವತಾರ.

**ಕಲ್ಲು ಹೊತ್ತು ನಿಂತಿರು**=ಕೂರ್ಮಾವತಾರ.

**ಅಡವಿಸೇರು**=ವರಾಹಾವತಾರ.

**ಇರುಳು-ಹಗಲು ಕಾಣಿಸಿಕೊಳ್ಳದಿಹನೆ**=ನರಸಿಂಹಾವತಾರ.

೨ ಕಂಡು... **ಒಂದು ಕಾಲಲಿ ನಿಲ್ಲುವನೆ**=ವಾಮನಾವತಾರ.

**ಕೊಡಲಿ ಹಿಡಿದು ನಿಲ್ಲು**=ಪರಶುರಾಮಾವತಾರ.

**ಉಪವಾಸವಿರು**=ರಾಮಾವತಾರ.

೩ **ಠಕ್ಕುಠವಳಿ ನಡಿಸು**=ಕೃಷ್ಣಾವತಾರ.

೩ **ಕೆಟ್ಟು ಬಯಲುಹೇವ ತೊರೆ**=ಬೌದ್ಧಾವತಾರ.

**ಕಲಿಯೂ ಆಗು**=ಕಲ್ಕ್ಯವತಾರ.

## ೧೦೫ನೆಯ ಹಾಡು

ಈ ಹಾಡಿನಲ್ಲಿಯೂ ದಶಾವತಾರದ ಲೀಲೆಗಳಿವೆ.

೧ **ಆಗಮವನು ತಂದವನೆ**=ಮತ್ಸ್ಯಾವತಾರ.

**ಗಿರಿಯ ಪೊತ್ತವನೆ**=ಕೂರ್ಮಾವತಾರ.

**ಮೂಗಿಂದ....ಎತ್ತಿದನೆ**=ವರಾಹಾವತಾರ.

**ಶಿಶು....ಒದಗಿದನೆ**=ನರಸಿಂಹಾವತಾರ.

೨ **ಧರಣಿಯ....ಮಾಡಿದನೆ**=ವಾಮನಾವತಾರ.

**ಭೂಸುರನಾಗಿ....ಧರಿಸಿದನೆ**=ಪರಶುರಾಮಾವತಾರ.

**ಭರದಿ ಕೋಡಗ....ಕೂಡಿದನೆ**=ರಾಮಾವತಾರ.

**ಫಣಿಯ....ಕುಣಿಕುಣಿದಾಡಿದನೆ**=ಕೃಷ್ಣಾವತಾರ.

೩ **ಉಟ್ಟುದ....ಬಿಸುಟಿಹನೆ**=ಬೌದ್ಧಾವತಾರ.

**ದಿಟ್ಟ....ಮೆರೆಯುವನೆ**=ಕಲ್ಕ್ಯವತಾರ.

## ೧೦೦ನೆಯ ಹಾಡು

ಇನ್ನೊಂದು ದಶಾವತಾರದ ಅಣಕವಾಡು.

೧ **ಹೊಲಸು ಮೆಯ್ಯುವ**=ಮತ್ಸ್ಯಾವತಾರ.

**ತಲೆದೋರದವ**=ಕೂರ್ಮಾವತಾರ.

**ಬಲುಕೇಶದವ**=ವರಾಹಾವತಾರ.

**ಬಾವನ್ನ**=ಶ್ರೀಗಂಧ, ಚಂದನ.

**ಸಲೆಘೋರರೂಪಿ**=ನರಸಿಂಹಾವತಾರ.

೨ **ತುಲಸಿಯ ಮಾಲೆ ಧರಿಸಿದವ**=ವಾಮನಾವತಾರ.

**ಜವ್ವಾಜಿ**=ಒಂದು ಸುಗಂಧದ್ರವ್ಯ.

**ಕೊಲೆಗಡುಕ**—ಪರಶುರಾಮಾವತಾರ.

**ಅಲೆದಾಡುವವ**=ರಾಮಾವತಾರ.

**ಅಂಗರಾಗ**=ಲೇಪನ.

೩ **ಕಳವು ಮಾಡುವ**=ಕೃಷ್ಣಾವತಾರ.

**ಪರಸತಿಯ ಬಯಸುವ**=ಬೌದ್ಧಾವತಾರ.

**ಹರಿದಾಡುವವ**=ಕಲ್ಕ್ಯವತಾರ.

**ಪಡಲಿಕೆ**=ತಲೆದಿಂಬು.

## ೧೦೭ನೆಯ ಹಾಡು

ಈ ಸುಳಾದಿಯಲ್ಲಿ ಪ್ರಾರಂಭದ ಎರಡು ನುಡಿಗಳಲ್ಲಿ ಶ್ರೀಕೃಷ್ಣನ ಬಾಲಲೀಲೆ ಇದ್ದು, ಮುಂದೆ ಶ್ರೀಕೃಷ್ಣನ ಭಕ್ತಿಯ ವಿಚಾರವನ್ನು ಹೇಳಲಾಗಿದೆ.

೧ **ತೊಡರು**=ಸರಪಳಿ.

**ಹೇಮವರ್ಣ ಶ್ಯಾಮ ಕೋಮಲಾಂಗ :**

ಶ್ಯಾಮಲ ವರ್ಣವಾಗಿದ್ದರೂ ಕೃಷ್ಣನ ಮೈಬಣ್ಣ ಬಂಗಾರದಂತೆ ಹೊಳೆಯುತ್ತಿದ್ದಿತ್ತು.

೨ **ಜಂಭಭೇದಿ**=ಇಂದ್ರ.

ಜಂಭನಿಗೆ ಜಂಭಾಸುರನೆಂಬ ಹೆಸರೂ ಇದೆ. ಇವನು ಬಲಿಯ ಮಿತ್ರ. ಇಬ್ಬರೂ ಕೂಡಿ ಇಂದ್ರನ ಕೂಡ ಯುದ್ಧ ಮಾಡುವಾಗ, ಬಲಿ ಮೂರ್ಛೆ ಹೊಂದಲು, ಈತನು ಸಿಂಹವನ್ನೇರಿ ಇಂದ್ರನೊಡನೆ ಹೋರಾಡಿ, ಅವನಿಂದ ಹತನಾದನು. ( ಭಾಗ ೮–೧೧–೧ ).

**ತಿರುವೆಂಗಳಪ್ಪ**=ಶ್ರೀವೆಂಕಟೇಶ.

೪ **ವಿಹಂಗಗಮನ**=ಗರುಡಗಮನ, ವಿಷ್ಣು.

## ೧೦೮ನೆಯ ಹಾಡು

ಈ ಸುಳಾದಿಯಲ್ಲಿ ಬಾಲಕೃಷ್ಣನ ಬಣ್ಣನೆಯೊಂದಿಗೆ ಆತನ ವಿಷಯಕವಾದ ಉತ್ಕಟಭಕ್ತಿಯನ್ನೂ ಹೇಳಲಾಗಿದೆ.

೧ **ಉಪಬರ್ಹಣ**=ದಿಂಬು.

**ಉಗ್ಗಡಿಸು**=ಸಾರು, ಘೋಷಿಸು.

೨ **ಮಖ**=ಯಜ್ಞ.

**ವಿಖನಸರು**=ಋಷಿಗಳು.

೩ **ಕತ್ತಾವರೆ**=( ಕರಿದು ತಾವರೆ ) ಕರಿಯಕಮಲ.

**ವೀರೆ**=ಪರಿಮಳ.

೫ **ನೋಂತಳೊ**=ವ್ರತ ಮಾಡಿದಳೊ.

**ದಾಮ**=ಹಗ್ಗ.

## ೧೦೯ನೆಯ ಹಾಡು

ಈ ಸುಳಾದಿಯಲ್ಲಿ ಶ್ರೀಕೃಷ್ಣಭಕ್ತಿಯನ್ನೇ ವಿವರಿಸಲಾಗಿದೆ.

೧ **ಕರಡಿಯ ಮಗಳು**=ಜಾಂಬವತಿ.

**ನಾರಾಯಣಿ**=ಮೋಹಿನೀ ರೂಪದ ವಿಷ್ಣು.

೩ **ಹೊದ್ದು**=ಹೊಂದು.

**ಮಾಣ್**=ಬಿಡು.

೫ **ಅನ್ಯೂನ**=ಕೊರತೆಯಿಲ್ಲದಂತೆ.

## ೧೧೦ನೆಯ ಹಾಡು

ಶ್ರೀಕೃಷ್ಣನ ಮಂಗಲಗೀತವಿದು.

೧ **ಜೀವಾತ್ಮನಾದ**=ಜೀವಿಗಳೆಲ್ಲರ ಆತ್ಮನಾಗಿರುವ.

# ಪರಿಶಿಷ್ಟ ೨

## ಹಾಡುಗಳ ಅಕಾರಾದಿ ಸೂಚಿ

# ಪರಿಶಿಷ್ಟ ೩

## ಪ್ರಮುಖಪದಸೂಚಿ

## ನಾಟ್ಯ



## ನದಿಗಳು



## ಪಟ್ಟಣಗಳು

## ರಾಗಗಳು



## ಸಂಗೀತಕೋಶ



## ವಾದ್ಯಗಳು

## ವಾದ್ಯಾಕ್ಷರಗಳು

## ವಿದ್ವಾಂಸರ ಸಲಹಾ ಮಂಡಳ

ಶ್ರೀ. ಪಂಡಿತ ಶ್ರೀನಿವಾಸಾಚಾರ್ಯ ಜಾಲಿಹಾಳ
" " ವೆಂಕಣ್ಣಾಚಾರ್ಯ ಮಳಗಿ
" " ಮೂರ್ತಾಚಾರ್ಯ ರಾಯಚೂರ
" ವಿದ್ಯಾರತ್ನ ರಾಘವೇಂದ್ರಾಚಾರ್ಯ ಪಂಚಮುಖಿ
" ಪಂಡಿತ ಗುರುರಾಜಾಚಾರ್ಯ ಪಾಂಡುರಂಗಿ
" " ಶ್ರೀ. ಸೇತುರಾಮಾಚಾರ್ಯ ಆದ್ಯ
" " ಕೆ. ಟಿ. ಪಾಂಡುರಂಗಿ, M.A.

## ಉತ್ಸವ ಮಂಡಲದ ಅಧಿಕಾರಿವರ್ಗ

### ಅಧ್ಯಕ್ಷರು

ಶ್ರೀ. ಅನಂತರಾವ ಅಸುಂಡಿ,
ನಿವೃತ್ತ ಜಿಲ್ಲಾ ನ್ಯಾಯಾಧೀಶರು, ವಿಜಾಪೂರ

### ಉಪಾಧ್ಯಕ್ಷರು

ಶ್ರೀ. ಗೋರೆಬಾಳ ಹಣಮಂತರಾಯರು,
ವರದೇಂದ್ರ ಸಾಹಿತ್ಯಮಂಡಲ, ಲಿಂಗಸುಗೂರು
,, ಸುಬೋಧ ರಾಮರಾಯರು,
ಸಂಪಾದಕರು, "ಸುಬೋಧ", ಬೆಂಗಳೂರು
,, ಕೋಲಾರ ರಾಮರಾಯರು, M. A., LL B. ಬಳ್ಳಾರಿ
,, ಬಿ. ಅಶ್ವತ್ಥರಾವ, ಜಿಲ್ಲಾ ನ್ಯಾಯಾಧೀಶರು, ಬಳ್ಳಾರಿ,
,, ಬಿ. ಎ. ದೇಸಾಯಿ, ( ದೇಸಾಯಿ ಕಂಪನಿ ) ಹುಬ್ಬಳ್ಳಿ

### ಕೋಶಾಧ್ಯಕ್ಷರು

ಡಾ. ಶಾಂತರಾವ ಕಮಲಾಪೂರ, M. B.B S. ಧಾರವಾಡ

### ಕಾರ್ಯಾಧ್ಯಕ್ಷರು

ಶ್ರೀ. ಹ. ರಾ. ಪುರೋಹಿತ, M. A. ಹುಬ್ಬಳ್ಳಿ

### ಕಾರ್ಯದರ್ಶಿಗಳು

ಶ್ರೀ. ಬುರ್ಲಿ ಬಿಂದುಮಾಧವ
,, ಕೆ. ಜಿ. ಹಲಸಗಿ, B. A.. B. T.
,, ಹುಚ್ಚರಾವ ಬೆಂಗೇರಿ, M. A., B. T.

PRATIBHA P. DHARWAR

## *About the book....*

Krishna Lila is the title of the IVth of the series of six volumes proposed to be published by the Utsava Samiti.

In this volume are collated all the available compositions of Shri Purandara-Dasa on Lord Shri Krishna. They describe sportive acts, deeds and exploits of Shri Krishna in his infancy, boyhood and so on and are grouped under nine appropriate sub-titles as Shaishava Lila, Bala Lila etc.

A scholarly and elaborate thesis in English on Suladis and Ugabhogas in Karnataka Music by Prof. R. Satyanarayanrao of the Varalakshmi Academics of Fine Arts of Mysore and a short history in Kannada of Bhakti Cult by the editors are the special features of the book.

Usual notes, explanations and references are given to make the book more useful to the readers.